ಒಂದು ನೂರಾ ಐದನೆಯ ಪ್ರಕಟಣೆ

# ಮುಗಿಯದ ಹಾಡು

(ಕವಿ ಕಣವಿ ಕುರಿತ ಕವನ ಸಂಕಲನ)

ಸಂಪಾದಕರು

**ಗುರುಲಿಂಗ ಕಾಪಸೆ**



೧೯೯೮

'MUGIYADA HADU' a collection of poems edited by Dr. Guruling Kapse and published by Shri Raghavendra Prakashana Ambarkodla, Ankola - 581314 (Karnataka State) First Impression: June, 1998

Copies: 1000

Total Pages: 87+viii

Price: Rs.40/-

ಬೆಲೆ: ರೂ.೪೦/-



ಹೊದಿಕೆ ವಿನ್ಯಾಸ : ಶ್ರೀ ಶಂಕರ ಪಾಟೀಲ

ಅಕ್ಷರ ಜೋಡಣೆ : ಅಖಿಲ್ ಗ್ರಾಫಿಕ್ಸ್,
ಜಯನಗರ, ಧಾರವಾಡ

ಮುದ್ರಣ : ಬೃಂದಾವನ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್ ಲಿ.
ಲಾಲಬಾಗ ಫೋರ್ಟ ರೋಡ, ಬೆಂಗಳೂರು-೪

# ಸಂಪಾದಕರ ಮಾತು

ಭಾರತ ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ಸಂದರ್ಭದಲ್ಲಿರುವ ನಾವು ರಾಷ್ಟ್ರೀಯ ಜೀವನದ ಹಲವು ಏರಿಳಿತಗಳಲ್ಲಿ, ಅನುಕೂಲತೆ-ಪ್ರತಿಕೂಲತೆಗಳಲ್ಲಿ ತೀರಾ ಅತೃಪ್ತರೇನೂ ಆಗಿಲ್ಲ. ಪ್ರಾಮಾಣಿಕತೆ ಮತ್ತು ಕಾಯಕನಿಷ್ಠೆಗಳ ಕೊರತೆಯನ್ನು ಅನುಭವಿಸುತ್ತಲೂ ಪ್ರಗತಿಪರವಾದ ಮಾರ್ಗವನ್ನು ತುಳಿಯುತ್ತಿದ್ದೇವೆ. ಕೃಷಿ, ವಿಜ್ಞಾನ, ಶಿಕ್ಷಣ, ಸಾಹಿತ್ಯ, ವಾಣಿಜ್ಯ-ವ್ಯವಹಾರ ಇತ್ಯಾದಿ ಕ್ಷೇತ್ರಗಳಲ್ಲಿ ಎಡರು ತೊಡರುಗಳಿದ್ದರೂ ಗಮನಾರ್ಹವಾಗಿ ಮುನ್ನಡೆದಿದ್ದೇವೆ.

ರಾಷ್ಟ್ರೀಯ ಬದುಕನ್ನು, ಅದರ ಸಾಧನೆಯನ್ನು, ಅದರ ಓರೆ-ಕೋರೆಗಳನ್ನು ಅರ್ಥಪೂರ್ಣವಾಗಿ ಗಮನಿಸುವವರು ನಮ್ಮ ಲೇಖಕರು ಮತ್ತು ಕವಿಗಳು. ಶೆಲ್ಲಿ ಕವಿ ಹೇಳಿದಂತೆ "ಕವಿಗಳು ಜಗತ್ತಿನ ಪ್ರಚ್ಛನ್ನ ಶಾಸಕರು'ಎಂಬುದು ಒಂದು ಶಾಶ್ವತ ಸತ್ಯ. ಈ ಶತಮಾನದ ಅನೇಕ ಕವಿಗಳು ತಮ್ಮ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದ್ದುದನ್ನು ನಾವು ಕಾಣುತ್ತೇವೆ. ಕನ್ನಡದ ಮಟ್ಟಿಗೆ ಮಾತನಾಡುವುದಾದರೆ ಮಾಸ್ತಿ, ಬೇಂದ್ರೆ, ಕುವೆಂಪು, ಕಾರಂತ ಇತ್ಯಾದಿ ಲೇಖಕರ ಕೊಡುಗೆ ಅನನ್ಯವಾದದ್ದಾಗಿದೆ. ಅವರ ಮುಂದಿನ ತಲೆಮಾರಿನವರಾದ ಅಡಿಗ, ಕೆ. ಎಸ್. ನರಸಿಂಹಸ್ವಾಮಿ, ಜಿ. ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ ಈ ಮುಂತಾದವರ ಸಾಹಿತ್ಯ ಕೃಷಿಯೂ ಅಸಾಧಾರಣವಾದದ್ದಾಗಿದೆ. ಒಂದು ವಿಶೇಷವೆಂದರೆ ಶಿವರುದ್ರಪ್ಪ ಮತ್ತು ಕಣವಿ ಹಾಗೂ ಅವರ ಓರಿಗೆಯವರು ಸಾಹಿತ್ಯಕ್ಷೇತ್ರದಲ್ಲಿ ಪ್ರವೇಶಿಸುವುದಕ್ಕೂ ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕೂ ಸರಿಹೋಗಿದೆ. ಆದ್ದರಿಂದ ಈ ಲೇಖಕರ ಸಾಹಿತ್ಯ ಕೃಷಿಯ ಸುವರ್ಣ ಮಹೋತ್ಸವದ ವರ್ಷವೂ ಇದಾಗಿದೆ.

ಐವತ್ತು ವರ್ಷಗಳ ಕಣವಿಯವರ ಕಾವ್ಯ ಸಾಧನೆ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯಗಳ ತಿರುವುಗಳಲ್ಲಿ ಹಾಯ್ದು ಬಂದಿದೆ. ಆದರ್ಶದ ಕನಸುಗಾರಿಕೆಯಿಂದ, ವರ್ಗಸಂಘರ್ಷದ ಬಿಸಿಯಿಂದ, ಮಣ್ಣಿನ ವಾಸನೆ ಮತ್ತು ವಾಸ್ತವಪ್ರಜ್ಞೆಯ ನೆಲೆಯಿಂದ, ಎಲ್ಲ ಬಗೆಯ ಸಾಮಾಜಿಕ ವಿಷಮತೆಯನ್ನು ತೊಡೆದುಹಾಕಬೇಕೆಂಬ ಇಂದಿನ ಧೋರಣೆಯಿಂದ ಕಣವಿಯವರ ಕಾವ್ಯಸೃಷ್ಟಿ ಅನೇಕ ಮಜಲುಗಳನ್ನು ಕಂಡಿದೆ. ಕಾವ್ಯದ ಎಲ್ಲ ತಿರುವುಗಳಲ್ಲಿ ಸ್ಪಂದಿಸಿಯೂ ಸಾಂಸ್ಕೃತಿಕ ಎತ್ತರವನ್ನು ಕಾಯ್ದುಕೊಂಡ, ಮಾನವೀಯತೆಯ ಕಂಪನಗಳುಳ್ಳ ಅವರ ಕಾವ್ಯಕ್ಕೆ ಅದರದೇ ಆದ ಸೊಬಗಿದೆ, ಜೀವಂತ ಗತಿಯಿದೆ.

ಮಳೆಗಾಲದ ಪ್ರಾರಂಭದ ದಿನಗಳಲ್ಲಿ ಜನಿಸಿದ (೧೯೨೮ ಜೂನ ೨೮, ಆರಿದ್ರಾ ಮಳೆಯ ಪೂರ್ವಾರ್ಧದ ಭಾಗ) ಕಣವಿಯವರ ಕಾವ್ಯದಲ್ಲಿ ಪ್ರಕೃತಿಯ ಉಕ್ಕಂದವಿರುವಂತೆ, ಅದರ

ಸೊಗಡೂ ಬೇಕಾದಷ್ಟಿದೆ. ಮೋಡ, ಮಳೆ, ಮಿಂಚುಗಳನ್ನು ಕಂಡಾಗಲೆಲ್ಲ ಅವರ ಸ್ಫೂರ್ತಿ ಸೋಗೆ ನವಿಲಾಗುತ್ತದೆ. ಹುಟ್ಟಾ ಪ್ರಕೃತಿಕವಿಯಾಗಿರುವ ಕಣವಿ ಪ್ರಪಂಚದ ಗುಡುಗು, ಸಿಡಿಲುಗಳನ್ನು ಬಲ್ಲವರು. ನಾಲ್ಕುನೂರಕ್ಕೂ ಮಿಕ್ಕಿರುವ ಅವರ ಕವಿತೆಗಳಲ್ಲಿ ವೈವಿಧ್ಯಪೂರ್ಣವೂ ವ್ಯಾಪಕವೂ ಆದ ಜೀವನದರ್ಶನವಿದೆ.

ಕವಿಯಾಗಿ ಎತ್ತರದ ಸ್ಥಾನದಲ್ಲಿರುವ ಕಣವಿಯವರು ವ್ಯಕ್ತಿಯಾಗಿ ಬದುಕಿನ ಹತ್ತಿರದಲ್ಲಿದ್ದವರು. ಅವರ ಸರಳ, ಸ್ನೇಹಮಯ ವ್ಯಕ್ತಿತ್ವ ಹಿರಿಕಿರಿಯರ ಪ್ರೀತಿ, ಗೌರವಗಳಿಗೆ ಪಾತ್ರವಾದದ್ದಾಗಿದೆ. ಅವರಿಗೆ ಎಪ್ಪತ್ತು ತುಂಬುತ್ತಿರುವ (೧೯೯೮ ಜೂನ ೨೮ಕ್ಕೆ) ಈ ಸಂದರ್ಭದಲ್ಲಿ ಅವರ ಕವಿತ್ವ ಮತ್ತು ವ್ಯಕ್ತಿತ್ವವನ್ನು ಗುರುತಿಸುವ ಕವನ ಸಂಗ್ರಹವನ್ನು ಸೃಜನ-ಚಿಂತನ ಬಳಗವು ಅಭಿನಂದನ ಗ್ರಂಥವಾಗಿ ಅರ್ಪಿಸಲು ಮುಂದಾಗಿದೆ. ಐವತ್ತಕ್ಕೂ ಮಿಕ್ಕಿರುವ ಇಲ್ಲಿಯ ಕವಿತೆಗಳಲ್ಲಿ ಆಯಾ ಕವಿಯ ಭಾವನಾತ್ಮಕ ಸಂಬಂಧದ ಬೆಸುಗೆಯನ್ನು ಕಾಣಬಹುದು. 'ಆದಾವ ನಮ ಜೋಳ, ಉಳದಾವ ನಮ ಹಾಡ'ಎಂಬಂತೆ ಇದು 'ಮುಗಿಯದ ಹಾಡು'ಗಳುಳ್ಳ ಜೀವಧ್ವನಿ ಸಂಗ್ರಹ.

ಈ ಸಂಗ್ರಹದಲ್ಲಿ ಸಮಾವೇಶಗೊಂಡ ಕವಿತೆಗಳಲ್ಲಿ ಕೆಲವು ಆಗಲೇ ಬರೆದವುಗಳು. ಅಂಥ ಕವಿತೆಗಳ ಕೆಳಗೆ ಅದು ಪ್ರಕಟವಾದ ಇಲ್ಲವೆ ಬರೆದ ಇಸ್ವಿಯನ್ನು ಸೂಚಿಸಲಾಗಿದೆ. ಉಳಿದ ಕವಿತೆಗಳು ಹೊಸದಾಗಿ ರಚಿತವಾದವು. ಕಣವಿಯವರ ಸ್ನೇಹ ವರ್ತುಳ ತುಂಬಾ ವಿಶಾಲವಾದದ್ದಾಗಿದ್ದರೂ ಒಂದು ಪರಿಮಿತಿಗೆ ಒಳಪಟ್ಟು ಸಂಪಾದನೆಯ ಕಾರ್ಯ ನಡೆದಿದೆ. ಈಗ ನಮ್ಮ ಮಧ್ಯದಲ್ಲಿ ಇಲ್ಲದ ದಿನಕರ ದೇಸಾಯಿ ಮತ್ತು ವೇಣುಗೋಪಾಲ ಸೊರಬ ಅವರನ್ನು ಸ್ಮರಿಸುತ್ತ, ನಮ್ಮ ಕೋರಿಕೆಯನ್ನು ಮನ್ನಿಸಿ ಕವಿತೆಯನ್ನು ನೀಡಿದ ಎಲ್ಲ ಕವಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಂಕೋಲೆಯ ಶ್ರೀ ರಾಘವೇಂದ್ರ ಪ್ರಕಾಶನದ ಶ್ರೀ ವಿಷ್ಣು ನಾಯ್ಕರು ಸ್ವಸಂತೋಷದಿಂದ ಪ್ರಕಟನೆಯ ಭಾರವನ್ನು ಹೊತ್ತುಕೊಂಡಿದ್ದಾರೆ. ಅವರನ್ನು ಪ್ರತ್ಯಕ್ಷವಾಗಿ ನಾನು ಕಂಡಿಲ್ಲವಾದರೂ ಅವರ ಶ್ರದ್ಧೆ, ಶಿಸ್ತು, ಸೌಜನ್ಯ, ಸಹೃದಯತೆಗಳು ಪತ್ರವ್ಯವಹಾರದ ಮೂಲಕ ವ್ಯಕ್ತವಾಗಿ ನನ್ನನ್ನು ಬೆರಗುಗೊಳಿಸಿವೆ. ಅವರ ಈ ಅಪರೂಪದ ವ್ಯಕ್ತಿತ್ವಕ್ಕೆ ಧನ್ಯತೆಗಳು.

ಈ ಕಾರ್ಯದಲ್ಲಿ ಸಹಕರಿಸಿದ ಎಲ್ಲ ಗೆಳೆಯರಿಗೆ ನನ್ನ ಆತ್ಮೀಯ ವಂದನೆಗಳು.

ಧಾರವಾಡ

**– ಗುರುಲಿಂಗ ಕಾಪಸೆ**

೧-೬-೧೯೯೮

# ಪ್ರಕಾಶಕರ ನುಡಿ

ಈ ಶತಮಾನವು ಕಂಡ ಕನ್ನಡದ ಮಹತ್ವದ ಕವಿಗಳಲ್ಲಿ ಒಬ್ಬರಾದ ಶ್ರೀ ಚೆನ್ನವೀರ ಕಣವಿಯವರಿಗೆ ಎಪ್ಪತ್ತು ತುಂಬುತ್ತಿರುವ ಸುಸಂದರ್ಭದಲ್ಲಿ-ಅವರನ್ನು ಕುರಿತು ನಾಡಿನ ಅನೇಕ ಕವಿಮಾನ್ಯರು ಬರೆದ ಕವನಗಳ ಈ ಸಂಕಲನವನ್ನು ಪ್ರಕಟಿಸುವ ಸದವಕಾಶ ಒದಗಿ ಬಂದ ಬಗ್ಗೆ ರಾಘವೇಂದ್ರ ಪ್ರಕಾಶನಕ್ಕೆ ತುಂಬಾ ಸಂತೋಷವಾಗಿದೆ.

ಕವಿ ಕಣವಿಯವರು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಮೂರು ಪ್ರಮುಖ ಘಟ್ಟಗಳನ್ನು ದಿಟ್ಟತನದಿಂದ ದಾಟಿ ಗೆದ್ದೆದ್ದು ಬಂದವರು. ಎಲ್ಲ ಹಂತದಲ್ಲೂ ತಮ್ಮದೇ ಆದ ಛಾಪನ್ನು ಒತ್ತಿದವರು. ಅವರದು ಚಿರಂತನದಾಹ. ಅವರ ಕಾವ್ಯಗಳಲ್ಲಿ ಕಾಣಸಿಗುವ ಪ್ರತಿಮಾಸೃಷ್ಟಿ, ಪ್ರಾಸ-ಲಯಗಳ ಹದಮುದವಾದ ಹೊಂದಾಣಿಕೆ, ಭಾವ-ಬುದ್ಧಿಗಳೆರಡನ್ನೂ ಏಕಕಾಲಕ್ಕೆ ಸಮಸಮವಾಗಿ ಸಂತುಷ್ಟಗೊಳಿಸುವ ಕವಿಕಲಾಕಸಬುಗಾರಿಕೆ ಅನನ್ಯ ಎಂದರೂ ತಪ್ಪಾಗದು.

ಪ್ರಸ್ತುತ 'ಮುಗಿಯದ ಹಾಡು' ಕಾವ್ಯಗುಚ್ಛದಲ್ಲಿ ಕಣವಿಯವರನ್ನು, ಅವರ ಸಾಹಿತ್ಯಲೋಕದ ಸಾಧನೆಯನ್ನು ಬಹುಹತ್ತಿರದಿಂದ ಬಲ್ಲ ಅನೇಕ ನಾಮಾಂಕಿತ ಕವಿಗಳು ಬರೆದ ವೈವಿಧ್ಯಮಯ ಕವನಗಳಿವೆ. ಕಣವಿಯವರ ಕಿಲುಬಿಲ್ಲದ ವ್ಯಕ್ತಿತ್ವದ ಹಾಗೂ ಕರ್ತೃತ್ವದ ಮುಖಗಳನ್ನು ಕಾವ್ಯದಲ್ಲಿ ಹಿಡಿದಿಡುವ ಈ ಬಗೆಯ ನುಡಿಸಾಹಸ ಒಂದು ಅಪರೂಪದ ಉಪಕ್ರಮವೆಂದೇ ಹೇಳಬೇಕು. ಈ ಬಗೆಯ ಸಾಹಸದ ಕುರಿತು ಮೊಟ್ಟಮೊದಲು ಚಿಂತನೆ ನಡೆಸಿ ಕವಿ ಕಣವಿಯವರಿಗೆ ವಿನೂತನ ರೀತಿಯಲ್ಲಿ ಅಭಿನಂದಿಸಲು ಮುಂದಾದವರು ಧಾರವಾಡದ 'ಸೃಜನ-ಚಿಂತನ' ಬಳಗದ ಗೆಳೆಯರು, ವಿಶೇಷವಾಗಿ ಡಾ. ಗುರುಲಿಂಗ ಕಾಪಸೆ, ಡಾ. ಜಿ.ಎಂ. ಹೆಗಡೆ ಮುಂತಾದ ಕಣವಿಯವರ ಅಖಂಡ ಅಭಿಮಾನಿಗಳು. ಇವರಿಗೆ ಮತ್ತು ಇವರ ಬೆನ್ನಾಸರೆಯಾಗಿ ನಿಂತ ಉಳಿದೆಲ್ಲ ಮಿತ್ರರಿಗೆ ನಾನು ಋಣಿಯಾಗಿದ್ದೇನೆ.

ಈ ಸಂಕಲನಕ್ಕಾಗಿ ತಮ್ಮ ಕವನಗಳನ್ನು ನಿಗದಿತ ಅವಧಿಯೊಳಗಾಗಿ ಕಳಿಸಿಕೊಟ್ಟ ಮತ್ತು ಈಗಾಗಲೇ ಬಿಡಿಬಿಡಿಯಾಗಿ ಅಲ್ಲಲ್ಲಿ ಪ್ರಕಟವಾದ ಕವನಗಳನ್ನು ಬಳಸಿಕೊಳ್ಳಲು ಅನುಮತಿಯನ್ನು ಇತ್ತ ಎಲ್ಲ ಕವಿಗಳಿಗೆ ರಾಘವೇಂದ್ರ ಪ್ರಕಾಶನವು ಆಭಾರಿಯಾಗಿದೆ. ಈ ಸಂಕಲನದ ಛಾಯಾಮುದ್ರಣ(ಡಿ. ಟಿ. ಪಿ.) ಕಾರ್ಯದಲ್ಲಿ ನಮಗೆ ಸಂಪೂರ್ಣ ಸಹಕಾರ ನೀಡಿದ ಧಾರವಾಡದ ಅಖಿಲ್‌ಗ್ರಾಫಿಕ್ಸ್ ಅವರಿಗೆ ಹಾಗೂ ಎಂದಿನಂತೆ ಮುದ್ರಣಕಾರ್ಯದಲ್ಲಿ ನೆರವಾದ ಬೆಂಗಳೂರಿನ ಬೃಂದಾವನ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್‌ನ ಶ್ರೀ ಕೌಜಲಗಿ ಬಂಧುಗಳಿಗೆ ನನ್ನ

ಹಾರ್ದಿಕ ಧನ್ಯವಾದಗಳು. ಈ ಸಂಕಲನಕ್ಕೆ ಸುಂದರ-ಸಾಂಕೇತಿಕ ಮುಖಚಿತ್ರ ಬರೆದುಕೊಟ್ಟ ಶ್ರೀ ಶಂಕರ ಪಾಟೀಲ ಅವರನ್ನು ನೆನೆಯದಿರಲಾರೆ. ರಾಘವೇಂದ್ರ ಪ್ರಕಾಶನದ ಇದುವರೆಗಿನ ಕೃತಿಗಳನ್ನು ಪ್ರೀತಿಯಿಂದ ಸ್ವೀಕರಿಸಿದ ನಾಡಿನ ಓದುಗರು ಈ ಕಾವ್ಯಕುಸುಮಾಂಜಲಿಯನ್ನೂ ಸ್ವಾಗತಿಸುತ್ತಾರೆಂಬ ನಂಬಿಕೆ ನನ್ನದು.

ವಿಷ್ಣು ನಾಯ್ಕ
ಪ್ರಧಾನ ಸಂಚಾಲಕ

'ಪರಿಮಳ'
ಅಂಬಾರಕೊಡ್ಲ, ಅಂಕೋಲಾ.

# ಪರಿವಿಡಿ

# ಅಪ್ರತಿಮ ಕವಿಯು

ಧಾರವಾಡದ ಕಣವಿ ಅಪ್ರತಿಮ ಕವಿಯು,
ಇವನ ಕವಿತೆಗಳಲ್ಲಿ ಸಕ್ಕರೆಯ ಸವಿಯು.
ಇಂಥ ಸವಿ ನಮ್ಮ ಕನ್ನಡದಲ್ಲಿ ವಿರಳ,
ಈ ಸವಿಯ ಸವಿಸವಿದು ನಾನಾದೆ ಮರುಳ.

*

ಕಣವಿಯವರ ಕವಿತೆಯೊಳಗುಂಟು ಲಾಲಿತ್ಯ,
ಲಾಲಿತ್ಯದೊಂದಿಗೇ ಅರಳುತಿದೆ ಸತ್ಯ.
ಈ ತರದ ಕವಿತೆಗಳ ನಾ ರಚಿಸಲಾರೆ,
ಕಣವಿಯವರ ಒಂದೊಂದು ಕವಿತೆಯೂ ತಾರೆ.

*

ನವ್ಯ ಲೇಹದ ಒಳಗೆ ಶುಂಠಿ ಪ್ರಾಚೀನ,
ಬೆರಸಲಿಕೆ ಶ್ರೀಕಣವಿಯವರು ಬಹಳ ನಿಪುಣ;
ಇಂಥ ನಿಪುಣತೆ ಕಾವ್ಯ ಲೋಕದಲಿ ವಿರಳ,
ವಿರಳವಿದ್ದಂತೆಯೇ ಅದು ಬಹಳ ಸರಳ.

*

ಚೆನ್ನವೀರನ ಕವಿತೆಯೂ ಬಹಳ ಚೆನ್ನು,
ಸಾಹಿತ್ಯಲೋಕದಲಿ ಇದಕೆಂಬೆ ಹೊನ್ನು,
ಈ ಹೊನ್ನಿನಿಂದ ಮಾಡಿದರೆ ಆಭರಣ
ಮತ್ತಷ್ಟು ಚೆಂದಗಾಂಬುದು ಈ ಸುವರ್ಣ.

*

ಕಣವಿ ಕವಿ ಹುಟ್ಟಿದ್ದು ಕನ್ನಡದ ಭಾಗ್ಯ,
ಇವನಿಂದ ಒಳಿತಾಯ್ತು ನಮ್ಮ ಆರೋಗ್ಯ,
ಇವನು ಬರೆಯುವ ವಿಡಂಬನಕುಂಟು ಧಾರೆ,
ಈ ಧಾರೆ ತೋರುವುದು ಪ್ರತಿಯೊಂದು ಸಾರೆ.

*

ಚೆನ್ನವೀರನ ಕವಿತೆಗಿರುವ ರಸಪಾಕ,
ಬಹಳ ರುಚಿಕರವೆಂದು ಸಾರುತಿದೆ ಲೋಕ,
ಇಂಥ ರುಚಿಕರ ಪಾಕ ಲಭಿಸುವುದು ಕಷ್ಟ,
ಸವಿದ ಪ್ರತಿಯೊಬ್ಬನೂ ಪೂರ್ಣ ಸಂತುಷ್ಟ.

*

ಕಣವಿಯವರ ಬರವಣಿಗೆಯಲಿ ವಿಡಂಬನವು
ಚೆನ್ನಾಗಿ ಒಡಮೂಡಿ ಸುಖಿಸುವುದು ಮನವು;
ಇದರ ಖಾರದ ರುಚಿಗೆ ಮರುಳಾಗಿ ನಾನು
ಖಾರವೇ ಬೇಕೆಂಬೆ, ಸಾಕೆಂಬೆ ಜೇನು

*

ಚೆನ್ನವೀರನ ಕವಿತೆಗಳ ನೋಡಿ ನಾನು
ಚಂದ್ರನಿಗೆ ಮೊನ್ನೆ ಮಾಡಿದೆನು ಟೆಲಿಫೋನು;
ಹೇಳಿದೆನು:ಚಂದಿರನೆ ನೀನಿರುವವರೆಗೆ
ಈ ಕವಿತೆಗಳು ಹಿಟ್ಟು ಚೆಲ್ಲುವವು ಧರೆಗೆ.

– ದಿನಕರ ದೇಸಾಯಿ
(೧೯೮೦)

# ನಿಮ್ಮ ಹಾಗೇ ನಿಮ್ಮ ಕವಿತೆ

ನಿರಂತರವಾಗಿ ತೊರೆ ಮೊರೆವ ಹಚ್ಚ ಹಸುರಿನ
ಕಣಿವೆ, ಗುಡುಗು ಮಿಂಚುಗಳ ಗದ್ದಲವಿರದ
ಶ್ರಾವಣದ ಬೆಳ್ಮೋಡಗಳ ಹಾಯಾಗಿ ಹರಡಿ-
ಕೊಂಡಾಕಾಶ. ಚೆಂಬೆಳಕು ತುಳುಕುವಂಗಳದ-

ಮರಗಿಡ ಬಳ್ಳಿ ಹೂ ಹಕ್ಕಿ ನಾಯಿಗಳ ಜತೆಗೆ
ಮಾತನಾಡುತ್ತಲೇ ಸುತ್ತಣ ಜಗತ್ತಿಗೆದೆ
ತೆರೆದು ಮೌನದನುಸಂಧಾನ. ಮೃದುವಚನ
ಮೂಲೋಕವನೆ ಗೆಲ್ಲುವುದೆಂಬ ನಂಬಿಕೆ-

ಯನ್ನು ನಿಕಷಕ್ಕೊಡ್ಡಿ, ಈ ಪಂಚತಂತ್ರ ಪ್ರ-
ಪಂಚದಬ್ಬರದ ನಡುವೆಯೂ ತೂಕ
ತಪ್ಪದ ನಿಲುವು. ಅಲ್ಲಿಂದ ಇಲ್ಲಿಂದ ಎಲ್ಲಿಂದಲೋ
ಬಂದ ಬೆಳಕುಗಳನ್ನು ಪ್ರಸನ್ನತೆಯ ಪಾಕ-

ದಲ್ಲಿ ಹರಳುಗೊಳಿಸುತ್ತ, ಸಾನೆಟ್ಟುಗಳ ಗುಡಿ
ಕಟ್ಟಿ ಒಳಗೊಂದು ಪ್ರೀತಿಯ ಹಣತೆ
ಹಚ್ಚಿಡುವ ಕಲೆಗಾರಿಕೆಗೆ ಲೋಕವೆ ಬೆರಗು;
ಬೇರೆ ಬಣ್ಣನೆ ಬೇಕೆ? ನಿಮ್ಮ ಹಾಗೇ ನಿಮ್ಮ ಕವಿತೆ.

– ಜಿ.ಎಸ್. ಶಿವರುದ್ರಪ್ಪ

## ಗೆಳೆತನಕ್ಕೆ

ಧಾರವಾಡದ ಕಣಿವೆಯ ತುಂಬ
ಬೇಸಿಗೆಯ ಮೋಡಗಳ ರೇಸ ಕಂಡು,
ಮೋಜಿಗೆ ವಿಭಾವಾನುಭಾವಗಳನುಂಡಂತೆ-
ಅಂಟುಂಡೆ, ಸಜ್ಜೆರೊಟ್ಟಿ, ಬೆಳಗಾಂವಿಯ ಕುಂದ-
ಯಾವುದನ್ನುಂಡರೂ ಲೈನ್‌ಬಜಾರ್ ಪೇಢೆ
ಬೇಕೇ ಬೇಕು ಅನ್ನಿಸಿದಾಗೆಲ್ಲ ಸುಮ್ಮನೆ
ನೆನಪಾಗುವ ಚೆಂಬೆಳಕಿನಲ್ಲಿ ಕಣವಿ:

ತಂಪಾದ ಕಂಪು ಸೂಸುವ ತುಂಬು-
ಸಂಸಾರದ ಬೆಳ್ದಿಂಗಳಿನ ಬದುಕು;
ಇಷ್ಟಾದರೆ ಸಾಕೆನ್ನುವಂತಿಲ್ಲ ಕಣವಿಗೆ ಮತ್ತು ನನಗೆ,
ಶಾಂತಕ್ಕನಿಗೆ ಹಾಗೇ ಪರಿಚಿತರಿಗೆ
ಮತ್ತೇನು ಬೇಕು ಹೇಳಿ-ಎಂದರೆ? ಬೇಕು-

ಧಾರವಾಡಕ್ಕೆ ಕನ್ನಡಕ್ಕೆ ಕನ್ನಡ ನಾಡಿಗೆ
ಇಷ್ಟಾದರೆ ಸಾಕಲ್ಲ ಬಿಡಿ ಎಂದರೆ?
ನನಗೆ ಬೇಕೇ ಬೇಕು ನಮ್ಮ ಗೆಳೆತನದಲ್ಲಿ
ಆಸೆಪಾಸೆಯ ಹಕ್ಕುಬಾಧ್ಯತೆಯ ನಸುಕು,
ಕಾವ್ಯಲೀಲೆಯಲ್ಲಿ ಕಣ್ಣುತೆರೆಯಿಸುವ ಬದುಕು.

– ಕ.ವೆಂ. ರಾಜಗೋಪಾಲ

## ಕಣವಿಯೊಳಗಿನ ದನಿ

ಗಾಳಿಪಟ ಕಂಡರೂ ದೂರದೂರದ ಸೀಮೆ
ದಾರಕ್ಕೆ ತಪ್ಪುವುದೆ ನೇಹದೊಲವಿನ ಋಣವು?
ಧರೆಯ ಮೇಲಿನ ಗಾಳಿಗೇರಿ ನಲಿವುದೆ ಗುಣವು,
ಸಹಜ ಸಾಹಸದಲ್ಲೆ ಜೀವಂತಿಕೆಯ ಹಿರಿಮೆ.

ನೆಲದ ಕನಸಿನ ನೀಲನಕ್ಷೆ ಮುಗಿಲಿನ ಮೇಲೆ
ಬರೆದರೂ ತಳಹದಿಗೆ ಮಹಲು ಶರಣೆನ್ನುವುದು,
ಕರುಳಿಗಂಟಿದ ನಂಟು ಕುಡಿಯೊಡೆದು ಬೆಳೆಯುವುದು
ಜೀವ-ಜಂಗಮಕಾವ ಸ್ಥಾವರದ ಸಂಕೋಲೆ?

ಬರಿಯ ತತ್ವದ ಮೇಲೆ ಬದುಕು ನಡೆಯುವುದಿಲ್ಲ,
ನಂಬಿದ್ದೆ ನಡೆಯಾಗಿ ಪಡೆದದ್ದೆ ಫಲವಾಗಿ
ನೆಲ-ಮುಗಿಲ ಬೆಸುಗೆಯಲಿ ಬಲಗೊಂಬ ಛಲವಾಗಿ
ಬೆಳೆವ ನೇಹದ ನಡೆಯನಾರು ತಡೆಯುವುದಿಲ್ಲ!

ಚಲನಶೀಲತೆಯಿಂತು ನಮ್ಮ ನೇಹದ ಬನಿಯು
ನಂಬಿದೆದೆ ಮಿಡಿಯುವುದು ಕಣವಿಯೊಳಗಿನ ದನಿಯು!

– ಬಿ.ಎ. ಸನದಿ

# ಸಮಾಹಿತ

ಕೆಂಡಸಂಪಗೆಯಲ್ಲ, ಮಲ್ಲಿಗೆ, ಜಾಜಿ, ಪಾರಿಜಾತ,
ಜಾತರೂಪ ನಮ್ಮ ಕಣವಿ!
ನೆಲ, ಮುಗಿಲು-
ಗಳ ಬೆಸೆದ ಕಾವ್ಯದ ಕಾಮನಬಿಲ್ಲು;
ಕವಿ ಮಾತ್ರ ನಿರಭ್ರ ಶುಭ್ರ ಆಕಾಶ:
ತಳೆದದ್ದಿಲ್ಲ ಎಂದೂ ವಿವಿಧ ವೇಷ!

"ಹಿತ ಮಿತ ಮೃದು ವಚನ":
ವಚನಕಾರರು ಕೊಟ್ಟ ಸಂಸ್ಕೃತಿಶ್ರೀಯ
ಸಾಕಾರ,
ಅಲ್ಲದಿರಬಹುದು ಪಾರಾವಾರ;
ನಿಶ್ಚಯವಾಗಿ ನಿಶ್ಚಲ ಸಮಾಹಿತ ಸರೋವರ!
ಕಣ್ಣು ಕುಕ್ಕುವುದಿಲ್ಲ ಬದುಕು:
ಚೆಂಬೆಳಕು;
ತಾನೆ ಅಪ್ಪಟ ಕವಿತೆ!
ಬರಿಯ ಭಾವಜೀವಿಯೆ?
ಬುದ್ಧಿ ವಿಲಾಸಕ್ಕಿಲ್ಲ ಕೊರತೆ!

ತೆಂಕಣಗಾಳಿಯ ಹಾಗೆ ಆಪ್ಯಾಯಮಾನ
ಕವಿ ಕಣವಿ;
ಕನ್ನಡದ ಕಣಕ್ಕಿತ್ತ ಕಾಳು ತುಂಬಿದ ತೆನೆಗಳ
ಬಣವಿ!

— ಸಿ. ಪಿ. ಕೆ.

## ಕಣವಿಯವರ ಕವಿತೆ

ಅಗ್ನಿಯೊಬ್ಬನೆ; ಅವನಿಗಿದ್ದಾವೆ ಹಲವು ಮುಖ:
ಕೆಂಗಣ್ಣು, ಕಿಡಿನುಡಿ, ಉರಿಯನಾಲಗೆ ಚಾಚಿ
ಕಾಡುಕಾಡನೆ ಬಿಡದೆ ನುಂಗಿ ನೊಣೆಯುವ ಮುಖ.
ಇನ್ನೊಂದು, ಒಲವಿಂದ ಮೈಪೂರ ನೆಕ್ಕುತ್ತ
ಮೃತ ಶರೀರವ ಚಿತೆಯ ಮೇಲಿಂದ ಎಬ್ಬಿಸುವ
ಚೈತ್ಯಾಗ್ನಿ ಮುಖ. ಮಂತ್ರ ಘೋಷಗಳ ನಡುನಡುವೆ
ತಲೆದೂಗಿ ಶುಭಮಸ್ತು ಶುಭಮಸ್ತು ಎನ್ನುತ್ತ
ಸಾಕ್ಷಿನಿಲ್ಲುವ ಅಗ್ನಿ-ಕುಂಡದೊಳಗೇ ಕುಡಿಯ-
ನೊಡೆವ ಧೂಪದ ಮರ. ಇನ್ನೊಂದು ಮುಖ, ಮಣ್ಣ
ಹಣತೆ ಚಿಪ್ಪಿನ ಒಳಗೆ ಸ್ನಿಗ್ಧ ಮುಗುಳ್ನಗೆ ನಗುವ
ಮುತ್ತು. ಮತ್ತೊಂದು ಮುಖ ಒಳಮನೆಯ ಒಲೆಯಲ್ಲಿ
ಕೂತು ಕೆಮ್ಮುಡಿಯಲ್ಲಿ ಅನ್ನದೇವರ ಹೊತ್ತ
ತಾಯಿಮೊಗ-ಅಲ್ಲಿರುವ ಹೊಳೆವ ಹವಳದ ನತ್ತು
ಹಿರಿಯಣ್ಣ ಕಣವಿ ರಚಿಸಿದ ಕವಿತೆಯಂತಿತ್ತು.

– ಎಚ್. ಎಸ್. ವೆಂಕಟೇಶಮೂರ್ತಿ

## ಕಣವಿ

ಕಾರಡವಿಯೊಡಲಿನಲ್ಲಿನ ಕಗ್ಗವಿ
ಒಳಗೆ ಸ್ಪಂದಿಸುವ ಭಾವದೊಣೆ
ಸಲಿಲಾವಗಾಹಕ್ಕಿಲ್ಲಿ ಬೇಕಿಲ್ಲ
ಆಚಮನ ಶುದ್ಧಿ; ಎದೆಯುಬ್ಬಿ ಸಂಪ್ರೋಕ್ಷಣೆ.

ಹಗಲಿನಕ್ಷತ ನೋಟ; ಜಂಜಾಟ-
ಕಿತ್ತು ಕಣ್ಣಿನ ರೆಪ್ಪೆ ವ್ಯಗ್ರಮಾಟ-
ಇಲ್ಲಿಲ್ಲ; ಗೊನೆ ಮಾಗಿದಲ್ಲಿ
ಹನಿಹನಿಯಾಗಿ ಜೇನು ತೊಟ್ಟಿಕ್ಕಿದಂತೆ!

ನಕ್ಷತ್ರ ಬೀಳುವುದು ಸಹಜಕ್ರಿಯೆ
ನೋಡಿದ ನೋಟವಷ್ಟೇ ಅಪೂರ್ವ-
ಕೂಡಿದ್ದು ಚದುರಿದ ವೇಳೆ ಹೊಸ ಅರ್ಥ
ಅಲ್ಲ ಮಿಡಿ, ಅಲ್ಲ ಕಿಡಿ, ಕೇವಲದ ಸತ್ವ.

– ವೇಣುಗೋಪಾಲ ಸೊರಬ
(೧೯೮೨)

# ಧಾರವಾಡದಲ್ಲಿ ಅಡ್ಡಮಳೆ

ಕಣವಿಯವರ ಆಕಾಶಬುಟ್ಟಿ ಪಟವಾಗಿ ಮೇಲೇರಿ
ಇನ್ನೇನು ಸೂತ್ರ ಕಿತ್ತು ಹಾರಬೇಕು
'ಸುನೀತಾ'- ಎಂದು ಕರೆದು ಹೆದರಿಸಿಬಿಟ್ಟರು.

ಅಂದಿನಿಂದ ಇದು ಚೆಂಬೆಳಕಿನ ತೋಟದಲ್ಲೆ
ಪುಟಿದು ಲಲ್ಲೆಗರೆವ ವಿಧೇಯ ಮೊಲದ ಮರಿ
ಆಡಿ ಬಾ ಅಂದರೂ ಹೋಗುವುದಿಲ್ಲ ಹೊರಗೆ.

ಗೇಟು ತೆರೆದು ನಿಂತ ಕಣವಿಯವರಿಗೆ ಏನೋ ದಿಗಿಲು
ಧಾರವಾಡದಲ್ಲಿ ಅಡ್ಡಮಳೆ
ತೊಯ್ದು ಪಂಡಿತರಂತೆ ನಿಂತ ಮರಗಳು.

ನೋಡ ನೋಡ್ತ ಜಾದು
ಫಕ್ಕನೆ ಹಕ್ಕಿಯೊಂದು ರೆಕ್ಕೆಬಿಚ್ಚಿದ ಜುಮ್ಮು
ಒದ್ದೆ ಕಾಗದದಲ್ಲಿ ಕಾಮನಬಿಲ್ಲು.

– ಜಯಂತ ಕಾಯ್ಕಿಣಿ

# ಕಣಕಣದಿ ಕವಿ ಕಣವಿ

ನಡೆಚೆನ್ನ; ನುಡಿಚೆನ್ನ; ಮನದ ಒಳಗಡೆ ಚೆನ್ನ
ನೆಲೆವೀಡು 'ಚೆಂಬೆಳಕು' ಅದು ಕೂಡ ಚೆನ್ನ,
ಪೇಳಲೇನಿದೆ ಇನ್ನು? ಸತಿ-ಸುತರು ಸಹ ಚೆನ್ನ
ಸೂಸುನಗೆ ಬಲುಚೆನ್ನ; ಸ್ನೇಹ ಗುಣ ಚೆನ್ನ!

'ವೀರ'ಪದ ಮುಂದಿರಿಸಿ ನಿನ್ನ ಹೆಸರೂ ಚೆನ್ನ
ಮನೆತನಕ್ಕೆ ನೀ ಚೆನ್ನ ಮನೆಮಂದಿ ಚೆನ್ನ
ನಿನ್ನ ಪಡೆದಿಹ ತಂದೆ-ತಾಯಿಯರದೇ ಪುಣ್ಯ
ನಿನ್ನ ಪಾಲಿಗೆ ಅದುವೆ ದಿಟ ರನ್ನ ಚಿನ್ನ!

ಕಣಕಣದಿ ಕವಿಯೆನಿಸಿ 'ಕಣವಿ' ನೀ ರಸಗಟ್ಟಿ
ಅಣು-ರೇಣು-ತೃಣ-ಕಾಷ್ಠವೆಲ್ಲ ಪರಮೇಷ್ಠಿ,
ಮೊದಲಲ್ಲಿ 'ಕಾವ್ಯಾಕ್ಷಿ' ಕಂಡ ಪಕ್ಷಿಯ ದೃಷ್ಟಿ
ತೇಲಿಬಿಟ್ಟಿತು ಮತ್ತೆ ಆಕಾಶಬುಟ್ಟಿ!

ನವ್ಯ ನವೋದಯ ನವಮಾನವತೆಯ
ಸರಸ ಸಮನ್ವಯ ನಿನ್ನೊಳಗೆ
'ವಿಶ್ವವಿನೂತನ ವಿದ್ಯಾಚೇತನ'
ವಿನುತ-ಚಿರಂತನ ಸ್ವರ ಮೊಳಗೆ
'ವಿಶ್ವಭಾರತಿಗೆ ಕನ್ನಡದಾರತಿ'
ಹೊನ್ನತಟ್ಟೆಯೊಳು ನೀ ಬೆಳಗೆ
ನಿನ್ನಯ ಪ್ರತಿಭಾ -ಭಾನು ಅನವರತ
ಪ್ರಭೆಯನು ಬೀರಲಿ ಧರೆಯೊಳಗೆ!

ಜೂನ ಇಪ್ಪತ್ತೆಂಟು ಸಾವಿರದ ತೊಂಬತ್ತೆಂಟು
ಎಪ್ಪತ್ತು ನಿನಗೆಂದು ಶುಭದ ಗಳಿಗೆ!
ಗಳಿಸಿ ಸೊಗವ ಸಮಸ್ತಬಾಳು ನೂರುವಸಂತ
ಬಾಗುವೆನು ಜಗದೀಶ-ಚರಣಗಳಿಗೆ!!

– ಶ್ರೀನಿವಾಸ ತೋಫಖಾನೆ

# ಹೊಸಹೆಜ್ಜೆ

ಹೊಂಬಳದ ಈ ಹುಡುಗ
ಚೆಲ್ಲಿದನು ಚೆಂಬೆಳಕ;
ಕನ್ನಡದ ಕಾವ್ಯಗುಡಿಗೆ
'ಕಾವ್ಯಾಕ್ಷಿ' ತೆರೆದಿತ್ತು
ಧಾರವಾಡದ ಮಣ್ಣ ಹುಡಿಗೆ.
ಎಳೆತನದ ಆಟಗಳು
ತರತರದ ನೋಟಗಳು
ಹಳ್ಳಿಗಾಡಿನ ಸೊಬಗು
'ಭಾವಜೀವಿ'ಯ ತುಂಬ
ಚೆಲ್ಲುವರಿದಿತ್ತು.
'ಆಕಾಶ'ಬುಟ್ಟಿಯಲಿ
ಬಗೆ ಬಗೆಯ ಬಣ್ಣಗಳ
ಹೂವು ಅರಳಿತ್ತು.
'ನೆಲಮುಗಿಲು'ಗಳನಳೆದು
'ಎರಡುದಡ'ದಲಿನಿಂತು
' ಮಣ್ಣಿನ ಮೆರವಣಿಗೆ'
ಕಣ್ಣು ತಣಿಸಿತ್ತು.
'ಜೀವಧ್ವನಿ'ಯಲ್ಲೆಲ್ಲಾ
ಜೀವನದ ಒಳತಿರುಳು
ಅರಳಿನಿಂತಿತ್ತು.
ಹಾಡಿನಾ ದನಿಯನ್ನು
'ಹಕ್ಕಿಪುಚ್ಚ'ಕೆ ನೀಡಿ
ಮಕ್ಕಳನು ಮುದಗೊಳಿಸಿ
ಕುಣಿಯ ಹಚ್ಚಿತ್ತು.
ಬೆಳೆಯಿರಲಿ ಮಳೆಬರಲಿ
ಹೂವರಳಿ ನಿಂತಿರಲಿ
ಕಣವಿ ಮನದಾಳದಲಿ

ಹಾಡಾಗಿ ಹರಿದಿತ್ತು.
ನವೋದಯದ ಚೆಲುವು
ನವ್ಯದೆಡೆ ಒಲವು
ಸಮನ್ವಯ ದಾರಿಯಲಿ
ದೊರಕಿಹುದು ಗೆಲವು.
ಅವರಿವರ ಮಾರ್ಗದಲಿ
ಅಡಿಯಿಡದ ಛಲಗಾರ,
ತನ್ನದೇ ಹೊಸಹೆಜ್ಜೆ
ಮೂಡಿಸಿದ ಕಲೆಗಾರ.
ಮೃದು ಮಧುರ ಮಿದುಮಾತು
ಮನಸು ಮಲ್ಲಿಗೆಯರಳು
ಕರುಣೆ ತುಂಬಿದ ಕರುಳು
ಪ್ರೀತಿ-ನೇಹದ ನೆರಳು
ಕಣವಿ ಬದುಕಿನ ತುಂಬ.
ಎಪ್ಪತ್ತರ ಯುವಕ-
ಇನ್ನೂ ಬರೆಯುವ ತವಕ-
ಬರೆದುದೆಲ್ಲವೂ ಚಿನ್ನ
ಬದುಕು ಅಂತೆಯೆ ಚೆನ್ನ.

– ಶಂ. ಗು. ಬಿರಾದಾರ.

# ಕಣವಿಕಾವ್ಯ

‘ಹುಲ್ಲಿ’ಗೂ ‘ಹೂ’ ಮರುವಾದೆಯಿತ್ತಣ್ಣನಿವ,- ನಮ್ಮ
ದತ್ತಣ್ಣನೊಲು ದುಡಿಸಿಕೊಂಬೋ ಕಸಬುಗಾರ
ಅಸಲೀ ದೇಸಿಯನು-ಶ್ಲೇಷೆಯನು. ಶಾಲ್ಮಲೆಯ
ಪಕ್ಕದಲಿ ನಕ್ಕಾಗ ಮಾರ್ದವತೆ ಮಕಮಲ್ಲ
ಸಂಸ್ಕಾರ, ಮಧು-ಮಧುರಚೆನ್ನನೊಲು ಗುಣ-
ಸಾರ-ಸೌರಭವ ಹರಡಿದವನೆಣ್ಣೆಸೆಗೆ; ಬಗೆ ಚಿಗುರಿ
ಎದೆಹೂವು ಮೈನೆರೆದು ನಿಂತಾಗ ಮನೆಯ ಅಂಗಳ
ತುಂಬಾ ಲೋಕ ‘ಮಿತ್ರ’ನ ನೇಹ-ಸದ್ದಿಲ್ಲದೊಸಗೆ!

ಆ ದಡಕೂ ಈ ದಡಕೂ ಬುದ್ಧಿಭಾವವನಪ್ಪಿ
ಭಾವಬುದ್ಧಿಯನೊಪ್ಪಿ, ಪ್ರತಿಮಾವಿನ್ಯಾಸದೊಳು
ಆಕಾಶವೇ ಬುಟ್ಟಿ! ಮೆರವಣಿಗೆ ದಾರಿಯಲಿ ಕೆಂಪಿ-
ರುವೆಗಳ ಸಾಲು, - ತುರಿಸಿಕೊಳ್ಳಲೇಬೇಕು ತಲೆಗೆ
ಕಿರಿಕಿರಿಯಾಗಿ. ಹಸಿದುಂಬ ರಸಿಕರಿಗೊ ನೊರೆಹಾಲ
ಚೊಚ್ಚಲ ಕೆಚ್ಚಲುಣಿಸಿದ ರೀತಿ-ಕಣವಿಕಾವ್ಯದ ಕೀರ್ತಿ.

– ವಿಷ್ಣು ನಾಯ್ಕ

# ಅಂತರಂಗದ ದೀಪ್ತಿ ಒಳಗು ಹೊರಗು

ನಿಶೆ ಕರಗಿ ಕಲರವದ ಕಂಠದಲಿ ದಿಸೆ ಬೆಳಗೆ
ಚೆಂಬೆಳಗಿನಂಗಳದಿ ಸೂರ್ಯೋದಯ,
ಶೋಷಿತರ ನೆತ್ತರದ ಪಾಡು ಹಾಡಾದಾಗ
ಚೆಂಬೆಳಗಿನೊಳಹೊರಗೆ ಚಂದ್ರೋದಯ.

*

ಮುಗಿಲ ಬಿತ್ತರ ನೆಲದ ಹರಹುಗಳ
ಹೊಮ್ಮಿಸುವ ಮುಖದ ಕಳೆ,
ನುಡಿಗಣಿಯ ಕಡಲಾಳ ಒಡಲಾಳ
ಸಾಣೆ ಸಿರಿ ವಜ್ರದ ಬೆಳೆ.

*

ಗಿಡಬಳ್ಳಿ ಕೈಯಾರ ನೇವರಿಸಿ ಹೂ ನೆತ್ತಿ
ನಸುನಗೆಯ ನಯ ಉಭಯಕುಶಲೋಪರಿ,
ಚಿಗರುದಾಂಗುಡಿ ಬಾಚಿ, ಚಾಚಿ ಮೇಲೆತ್ತಿ
ನಿಚ್ಚೆರಗು ನುಡಿ ಅರಳೆ ಕವಿಹೃದಯದೈಸಿರಿ.

*

ಬುವಿಯ ಎದೆಯಾಳದಲಿ ಸಂವೇದನೆಯ ಬೇರು
ಮುಗಿಲುದ್ದ ತಲೆಯೆತ್ತಿ ಬಾಗಿರುವ ತೆಂಗು,
ಕನ್ನಡದ ನರುಗಂಪ ಬೀರಿ ಸಾಗಿದ ತೇರು
ಧವಳ ನಗೆ ಚುಂಬಿಸಿತೆ ಚಂದಿರನ ಚುಂಗು.

*

ಆ ಸಂಗ ಈ ಸಂಗ ನಿಸ್ಸಂಗ ಕ್ಷಣಗಳಲಿ
ಕಲ್ಯಾಣ ಚಿಂತನೆಯ ಶರಣ ನಿಚ್ಚೆರಗು,
ಮಹಮನೆಯ ದರ್ಶನದ ನಿಗೂಢ ಸೀಮೆಯಲಿ
ಸಂಚರಿಸಿ, ಸಾಧನೆಯ ಅಂತರಂಗದ ದೀಪ್ತಿ ಒಳಗು ಹೊರಗು.

*

ಕವಿಯಂತರಾಳದಲಿ ನಾಡ ಋಣ ಧ್ಯಾನ
ಜನಮನವನೆಚ್ಚರಿಸಿ ಹೊಮ್ಮೆ ಮಂಗಲ ಗಾನ,
ಕಟ್ಟೆಚ್ಚರದ ಕಾಪು ತಾಯ್ನುಡಿಯ ಮಾನ
ನೆಟ್ಟಿರಲು ಕ್ಷಿತಿಜದಲಿ ಕವಿಶಾಸನ.

– ದೇವೇಂದ್ರಕುಮಾರ ಹಕಾರಿ

# ಅನುಭಾವದ ಜಾಹ್ನವಿ

ಇದು ಕಾವ್ಯದ ಕಣವಿ, ಇಲ್ಲಿ ಕಲ್ಲಿಗಾಸ್ಪದವಿಲ್ಲ
ಅನುಭಾವದ ಬಣವಿ ಕಲ್ಲಾಗುವುದು ಸಕ್ಕರೆ ಬೆಲ್ಲ.
ಹುಳುಹುಪ್ಪಡಿಗಾಸ್ಪದವಿಲ್ಲ, ಇದ್ದರವು ಆಗುವವು
ದಿನನಿತ್ಯ ನೀಡುವ ರೇಶ್ಮೆಯ ವಸ್ತ್ರ ಬಟ್ಟೆಬರಿ ಶಾಲ.
ಕುರಿ ಇಲಿಗಳಿಗಾಸ್ಪದವಿಲ್ಲ ಇದ್ದರವು ಆಗುವವು
ಹುಲಿ ಕರಿ ಒಂದಕ್ಕಿಂತ ಒಂದು ಮೇಲ.

ಇದು ಕಾವ್ಯದ ಕಣವಿ
ಪೂರ್ಣಚಂದ್ರನ ಹುಣ್ಣಿವಿ;
ಇದು ಬರೀ ಸಾಹಿತ್ಯವಲ್ಲ,
ಇದು ಬರೀ ಮನುಷ್ಯತ್ವವಲ್ಲ,
ವಿಶ್ವವನೆ ಪ್ರೀತಿಸುವ ಅನುಭಾವದ ಜಾಹ್ನವಿ.

– ಚೆನ್ನಣ್ಣ ವಾಲೀಕಾರ

## ಸಂಪಿಗೆ ಮರ

ಸಹ್ಯಗಿರಿಯ ಮೌನ ಕರೆಯಾಗಿ
ಅನೂಹ್ಯ ವೃಕ್ಷಗಳ ಮೊರೆಯಾಗಿ,
ನೂರು ಸಾವಿರ ಬಣ್ಣದ ಹೂ-
ಗಣ್ಣ ಬೆಳಗಿಗೆ ತೆರೆದಿಟ್ಟು,
ನೆಲ ಮುಗಿಲ ಬಾಗಿಲು
ಕಾಯ್ದಳು ನಿಸರ್ಗದೇವಿ ತನಗಾಗಿ,
ತನ್ನ ಹಾವ ಭಾವಕ್ಕೆ ತಕ್ಕ
ಧ್ವನಿ ಕೊಡುವ ಭಾವಜೀವಿಗಾಗಿ.

ಮೈಮಣ್ಣಿನಲ್ಲಿ ರೂಪಿಸಿದ
ಪ್ರತಿರೂಪ ಗಣಪಮೂರ್ತಿಯಂತೆ,
ಜಾಜಿಯ ನಾಜೂಕು ನಯ
ಸೂರ್ಯಪಾನದ ಸ್ನೇಹದಭಯ
ಸೌಮ್ಯದೆತ್ತರದ ಸಂಪಿಗೆಮರ,
ಮಾತು ಮಾತಿಗೆ ಹನಿದ ಜೇನು
ಹೃದಯವೂ ತೆರೆದಿಟ್ಟ ಬಾನು!
ಎಷ್ಟೆಲ್ಲ ಹದವಾಗಿ ಮುದವಾಗಿ ಮಿದ್ದಿದಳೊ
ಎದ್ದ ಸೌಜನ್ಯಮೂರ್ತಿಯ ಆ
ಗಳಿಗೆ ಕಾವ್ಯಪಟ್ಟಕ್ಕೇರುವ ಸುಮೂಹೂರ್ತ!

ಧಾರವಾಡದ ಮಣ್ಣ ಮೊಳಕೆ,
ತಾಯ ಕಣ್ಣ ಸಣ್ಣ ಮಗನಾಗಿ
ಪ್ರೀತಿ ಮೊಗೆ ಮೊಗೆದು
ಹೆಮ್ಮರವಾದ, ಹೆಮ್ಮೆಗೆ ಗರಿಯಾದ!
ಕಟ್ಟುತ್ತ ದಿಗ್‌ದಿಗಂತಕೆ ಮೋಹಕ ಲೋಕ
ನುಡಿಸುತ್ತ ತನ್ನ ಕಾವ್ಯ ಕಿನ್ನರಿ!!
ಈ ನೆಲದ ಭಾಗ್ಯವೊ ಏನೋ
ಇವನು ಮುಟ್ಟಿದ ಕಲ್ಲೂ
ಅರಳಿ ಕವಿತೆಯಾಯ್ತು!!

– ಮಾಲತಿ ಪಟ್ಟಣಶೆಟ್ಟಿ
ಮುಗಿಯದ ಹಾಡು

# ಚೆಂಬೆಳಕ-ಪಥಿಕ

ಗಟ್ಟಿ ನುಡಿದರೆ ಗಾಳಿ ನಲುಗೀತೆಂದಂಜಿ
ಹಸಿರು ಹಾಸಿನ ಮೇಲೆ ಪಾರಿಜಾತದ ಶಬ್ದವಿಡುವವರು
ನೃತ್ಯಗಾತಿಯ ಬೊಗಸೆ ಹೂವ ಚೆಲ್ಲಿದ ಹಾಗೆ
ಅಚ್ಚ ಬಿಳುಪಿನ ನಗೆಯ ಅರಳಿಸುವರು.

ಕಾಲ ನೆಲದಲ್ಲಿಟ್ಟು ಎತ್ತರೆತ್ತರ ಬೆಳೆದು
ಕಾಲನೆದೆಯೊಳಗೆ ಚೂಪು ನೋಟ ಹರಿಸಿ
ತಾನು ನುಂಗಿದ ನೋವನೆಲ್ಲರಿಂದಲು ಮರೆಸಿ
ಕೆನ್ನೆಯಲಿ ಬೆಳುಗೊಳದ ಶಾಂತಿ ನಿಲಿಸಿ.

ಅತಿಗೆಂದು ಎಡೆಗೊಡದ ಶುಭ್ರ ಸ್ನೇಹದ ಗೆಳೆಯ
ಉಪದೇಶಗಳ ಚಟಕೆ ಹರದಾರಿ ದೂರ.
ನುಡಿವುದಕ್ಕಿಂತ ನುಡಿಸುವಲ್ಲಿಯೆ ಸುಖ ಕಾಂಬ ಜೀವಿ
ಮೌನ ಮೊಗ್ಗೆಯನೊಡೆದು ಬಂದರೆ ಮಾತು-ಉತ್ತರಮುಖಿ!

'ಶಾಂತಿ' ಸಾಂಗತ್ಯದಲಿ ಮಾಗಿ ಬಾಗಿದ ಜೀವ
ಚೆಂಬೆಳಗ ಹಾರೈಸಿ ನಡೆದಿರುವ ಪಥಿಕ.

– ಕಾವ್ಯಜೀವಿ
(ಡಾ. ಎಸ್.ಪಿ. ಪದ್ಮಪ್ರಸಾದ)
(೨೪-೧೨-೧೯೮೮)

# ಕಣಿವೆ - ಕಂದರ

ಕಂದರವಿಲ್ಲದೆ ಕಣಿವೆ ಎಲ್ಲಿದೆ, ಧನ್ಯತೆ ಕಾರುಣ್ಯದ ಗಿರಿ-ಶಿಖರ
ಒಂದೇ ಹುಟ್ಟಿನಲಿ ಎರಡು ದಡಗಳನು ಮುಟ್ಟಿ ನಾವೆ ಹಗುರ.

ಹೊಲೆ ಕಳೆಯಲೆಂದು ತಲೆ ತೊಳೆದುಕೊಂಡು, ರಮ್ಯತೆಯ ನಸುಕಿನಲ್ಲಿ
ನವೋದಯದ ಎಳೆ-ಬಿಸಿಲ ಕಾಸಿದಿರಿ, ಸಕ್ಕರೆಯ ಉಸುಕಿನಲ್ಲಿ,
ನಡುನೆತ್ತಿ ಸಿಡಿವ ಸುಡು ನವ್ಯ-ನಗರದಲ್ಲೂ ಹುಡುಕುತ್ತ ನಿಮ್ಮ ನೆರಳು
ಕಿಡಿ ಬಿದ್ದು ಕಣ್ಣು ಕುರುಡಾಗದಂತೆ ದಾಟಿಸುತ ಹೊಸ ಮಶಾಲು.

ಎದೆಗಿರಿಯದೇನೇ, ಎದೆಗಿಳಿದ ಎತ್ತಿದಿರಿ ಕಳೆದ ಕವಿತೆಗಳನು
ಹಸೆಗೆ ತಂದು ಕೈ ಹಿಡಿಸಿ ನುಡಿಸಿದಿರಿ ವಾಗರ್ಥ ಜೋಡಿಗಳನು;
ಕಳಚೆನುವ ಬಾನು, ತೊಡು ಎನುವ ಮಣ್ಣು, ಧ್ಯಾನದ ನಡುವೆ ಜೀಕು
ನೆಲದ ತುಂಬ ಹಾಸಿರುವ ಬಲೆಯ ನಂಬಿದಿರಿ ಯಾವುದಕ್ಕೂ.

ನಿಸರ್ಗ-ನಿಯತೆ, ನಿಯಮನದ ಅಂಕೆ, ಮೃದು ನಿರಾಲಂಬ ವಚನ
ಸಂಜೆ-ಮುಂಜಾನೆ, ಮಳೆ-ಬಿಸಿಲ ಹೆಣಿಕೆಯಲಿ ಸರ್ವವರ್ಣ ಚಯನ;
ಅಚ್ಚುಕಟ್ಟಾದ ಹೊಸ ಸವಿಯ ಬೆಲ್ಲ ರುಚಿಗೆಟ್ಟ ಪೇಟೆಯಲ್ಲಿ
ತಂದಿಟ್ಟು ಹೇಳಿದಿರಿ "ವಿಷದ ನಾಲಗೆಯ ಹಸನು ಮಾಡಿಕೊಳ್ಳಿ".

ಕೊಕ್ಕು-ಗುಟುಕು, ಉಕ್ಕಂದ ಚಿಲುಮೆ, ಸವಿ ಹೆಚ್ಚಿದಷ್ಟೂ ಸಫಲ
ಮೃತಿಗೆ ಸದ್ಗತಿಯ ಬಯಸಿ ಬದುಕ ಸಾರಿಸುವ ಕಾವ್ಯಶೀಲ;
ಸವಿ ಸಗುಣ ಮಾತಿನಲಿ ನಿರ್ಗುಣದ ಮೌನ, ತಾ- 'ಹದು' ಸಮೀಚೀನ
ಮುಳ್ಳು-ಹೂವುಗಳ ಮಾಲೆ ತೊಡಿಸುವರ ಮುಖ ಓದುವಂಥ ಕವನ.

ಕಂದರದ ತುಂಬ ತುಂಬಿಹುದು ರಕ್ತ, ಘನ ತಮಂಧದೆದುರು
"ಕತ್ತಲೆಗೆ ಹತ್ತೇ ತಲೆ?" "ಕೋದಂಡ-ದಂಡ" ಕಾವ್ಯ ಬರಿ ತುಂಡು-ಬಿದಿರು-
ಬೆದರು;
ಸಮನ್ವಯದ ಸಂಧಾನ ವಿಫಲ-ವೆಂಬೆಲ್ಲ ಮಾತು ಬೇರೆ
ಎಲ್ಲ ಯುದ್ಧಗಳ ಕೊನೆಗೆ 'ಕಣಿವೆ'ಯಲಿ ಹಾಯ್ದು ಬರುವರವರೆ.

— ಆನಂದ ಝುಂಜರವಾಡ

# ಹೊಂಬೆಳಕಿನ ಚಕ್ರಕಾವ್ಯ

ತಾಯೆ ನಿನ್ನಮಡಿಲೊಳು ಒಳದನಿ
ಬಿಡುಗಣ್ಣಬಾಲೆ ಬಿನ್ನಹಿಸುತಿಹಳು
ನಾವು ನಲ್ವತ್ತುಕೋಟಿ ಪ್ರಜಾಪ್ರಭುತ್ವದ ತೀರ್ಪು
ಒಂದು ಮುಂಜಾವು ಬರುವುದೆಲ್ಲ ಬರಲಿ ಬಿಡು ಎಂದಿತು.

ಬೇಲಿ ಮೇಲಿನ ನೀಲಿ ಹೂಗಳು
ಶ್ರಾವಣದ ಲಾವಣ್ಯಕ್ಕೆ ಮಣಿದು
ನೆಲಮುಗಿಲು ಮೊದಲ ಮಳೆಗೆ ನೆನೆದು
ಆಕಾಶ ಬುಟ್ಟಿಯಲಿ ಕುಳಿತ ರಂಜನಾ ಹೊಸ ಬಾಳು ನಮ್ಮದೆಂದಿದೆ.

ಕಿತ್ತೂರಕೋಟೆಯನ್ನು ಕಂಡು
ಕಿತ್ತೂರಿನ ಕಿಡಿಗಳು ಕೊನೆಯ ಎಚ್ಚರಿಕೆ ನೀಡಿವೆ;
ನಿಯಮೋಲ್ಲಂಘನ ಮಾಡಿದವರಿಗೆ
ಸಾವಗೆದ್ದಿಹ ಬದುಕು ನಮ್ಮದೆಂದು.

ಒಂದು ಮುಂಜಾವು ಮಧುರಚೆನ್ನರ ನೆನಪಿಗೆ
ಬೆಳಕು ಪರದೆಯ ಹಿಂದೆ ಮೋಡ ಉಸುರಿತು.
ನನ್ನ ಜೀವನದಿಂದ ಸಾವಿರದ ಸತ್ಯದ ಸಾಧನೆ
ಈಗಿನ ಮಕ್ಕಳು ಭೂಮಿತೂಕ ಮಣ್ಣಿನ ವಾಸನೆ ಎನಬೇಕು.

ಜೀವಜೀವಾಳದಲಿ ಕೂಡಿದಳು ಉಷೆಯ ಗೆಳತಿ
ಮೌನಭಾರ ವಿರಹಕೂಜನ ಪ್ರಣಯ-ಪ್ರೀತಿ ಕಾಣಿಕೆ;
ಕೊಡೆ ಎಂದರೆ ಯಾರು ಕೇಳುತ್ತಾರೆ ಹೇಳಿರಣ್ಣ
ಶ್ವೇತಪುತ್ರಿ ನೀ ಮಾಯಾಕೋಲಾಹಲ ಗೆಲುವೆನೆಂಬುವ ಭಾಷೆ ನೀಡು.

ಹಾಡಿನೊಡತಿಯಲಿ ಸುಗ್ಗಿ ಬಂದಿತು ಲೋಕಾನಂದವದು
ಇವನಿಂದಲೇ ನಮಗೆ ಬೈಗು-ಬೆಳಗು.

ಮನೆ-ಕಿಟಕಿ ಆಚೆ ಚೈತನ್ಯ ತ್ರಿಕೂಟ ಯಥಾಸ್ಥಿತಿ
ಕುಟುಂಬ ಸೌಖ್ಯದ ಆಖ್ಯಾನ ಸಿಂಪಿನೊಳಗಿನ ಮುತ್ತು, ಪ್ರೀತಿ ಸಂಬಂಧ.

ಕಾಲಪುರುಷನಲಿ ಕವಿಗಳ ಕೋರಿಕೆ ನಾಳಿನ ನವೋದಯದ
ನಿತ್ಯಪಯಣದಲಿ ಸೂರ್ಯನಿದ್ದಾನೆ ಬೆನ್ನ ಹಿಂದೆ,
ಇಪ್ಪತ್ತನೆಯ ಶತಮಾನಕ್ಕೊಂದು ಕನ್ನಡಿಯಂತೆ
ಮಾತಂಗ ಬೆಟ್ಟದಿಂದ ಗೋಳಗುಮ್ಮಟದವರೆಗೂ ಜೊತೆ.

– ಮಲ್ಲಿಕಾ ಘಂಟಿ

# ನೆಲ-ಮುಗಿಲ ಕೂಡಿಸುವ ಕನಸು

ಚೆಂಬೆಳಕ ತಂದವನು
ಹೊಂಬೆಳಕ ಸುರಿದವನು
ಗುಡ್ಡಬೆಟ್ಟವ ದಾಟಿ ಕಣವಿ
ಯಲ್ಲೇಕೆ ನಿಂತನು?

ಬಿರುಕು ಬಿಟ್ಟಿದೆ ನೆಲವು
ಹಾಳುಬಿದ್ದಿದೆ ಹೊಲವು
ನೆಲ-ಮುಗಿಲ ಕೂಡಿಸುವ
ಕನಸು ಕಂಡವನು!

ಏಳುದಶಕದ ನಡುವೆ
ಏಳುಕೊಳ್ಳವ ದಾಟಿ
ಹೂ ಹಣ್ಣು ತಂದವನು
ಹಸಿರುಡಿಸಿ ನಿಂತವನು,
ಮುಗಿಲಮಾರಿಯ ಮೇಲೆ
ಮುತ್ತುಗದ ಚಿತ್ತಾರ
ರೋಣಿಮಳೆ ಸುರಿದಂತೆ
ತೆನೆ ತುಂಬ ಮುತ್ತು!

ಆಕಾಶ ಬುಟ್ಟಿಯನು
ಅಂಗೈಯಲ್ಲಿ ಹಿಡಿದು
ಎರಡು ದಡ ಕಂಡಾಗ
ಕನಕಾಂಬರಿ-ಹೊನ್ನಂಬರಿ
ನೆಲದೆದೆಯ ತುಂಬೆಲ್ಲ ನಗೆಮುಖ
ಕೋಗಿಲೆ-ಕಾಜಾಣ
ಮನದಂಗಳದಲ್ಲೆಲ್ಲ ಚಿಲಿಪಿಲಿ ಸ್ವರ!
ಹಸಿರುಬಳ್ಳಿಯ ತುಂಬ

ನಸುಗೆಂಪಿನ ಮೊಗ್ಗು
ಮೊಗ್ಗು ಬಿರಿದಂತೆಲ್ಲ ಬರೀ ನೋವು
ಹರಿದಾಡಿದಂತೆ ಹಾವು
ಹಾವಿನ ಹಲ್ಲ ಕಿತ್ತು
ಹಾವನಾಡಿಸಬಲ್ಲ ಜಾಣ;
ನುಡಿದರೆ ಮುತ್ತು ಸುರಿದ್ಹಾಂಗ
ನಡೆದರೆ ಬೆಳಕು ಹರಿದ್ಹಾಂಗ
ಕವಿತೆ ಬರೆದರೆ
ಹಚ್ಚಿಟ್ಟ ದೀಪದ ಸಾಲು
ಹೊಳೆಸಾಲ ಹೊಲದಲ್ಲಿ
ಕುಣಿವ ನವಿಲು!!

– ಬಸವರಾಜ ಸಬರದ

# ಅಚ್ಚಗನ್ನಡ ಬೀಜ ಬಿತ್ತಿದರು

ಅಚ್ಚಗನ್ನಡ ಬೀಜ ಬಿತ್ತಿದರು ಕವಿ ಕಣವಿ
ಈ ನೆಲದ ಮಣ್ಣಿನಲಿ. ಬಂತು ಕಾವ್ಯದ ಫಸಲು
ತಪ್ಪಿದೊಲು ನೆಲಮುಗಿಲು, ಸಹೃದಯಿಗೇ ಮೀಸಲು
ಬಿಡದೆ ಕೃಷಿ ನಡೆದಿರಲಿ;ನಿಮಗಿದೊಂದೇ ಮನವಿ.

ನಮ್ಮ ದೀಪಧಾರಿಗೆ ಬೇಗ ಒಡಮೂಡಿದವು
ಕಾವ್ಯಾಕ್ಷಿ. ಸಿದ್ಧಿಸಿತು ದೃಷ್ಟಿ-ಸೃಷ್ಟಿಯ ಬದುಕು
ಒಳ ಹೊರಗೆ ಚೆಂಬೆಳಕು, ಕಲ್ಲು ಸಕ್ಕರೆ ಹಳಕು
ಆಕಾಶಬುಟ್ಟಿಯಲಿ ತೇಲಿಸಿ ನೋವು-ನಲಿವು.

ಭಾವಜೀವಿಗೆ ತಕ್ಕ ನಯ ನಾಜೂಕು ನಿಲುವು
ನಿಮ್ಮ ಎದೆ ತಿಳಿಗೊಳಿಸಿ ಪುಟಿಸುವನು ಕಾರಂಜಿ
ಜಾಜಿ ಮಲ್ಲಿಗೆಯಂತೆ ಮೃದುಮಾತು, ಅಪರಂಜಿ
ಬುದ್ಧಿ ಭಾವದ ಮೊಟ್ಟೆ ಮೇಲೆ ಹಕ್ಕಿಯ ಕಾವು.

ಎರಡು ದಡಗಳ ನಡುವೆ ಹರಿವ ನದಿ ಹೊಸನೀರು
ಇದೆ ಚಿರಂತನ ದಾಹ, ಬೇಕಾದನಿತು ಹೀರು.

– ಸಿದ್ಧರಾಜ ಪೂಜಾರಿ
(ಜುಲೈ ೧೯೯೮)

## ಕಾವ್ಯಸೃಷ್ಟಿಯ ಕಣಜ

ನನ್ನ ಜೀವನದ ಅವಿಸ್ಮರಣೀಯ ಸುಂದರ ಸ್ಥಳಗಳನು
ಅನುಭವಿಸಿದ್ದು ಆನಂದಿಸಿದ್ದು ಹಿಮಾಲಯದ ಕಣಿವೆಗಳಲಿ;
ಆಳದಿಂದ ಎತ್ತರಕ್ಕೂ ಎತ್ತರದಿಂದ ಆಳಕ್ಕೂ ಕಣ್ಣುಗಳು
ಎವೆ ಇಕ್ಕದೆ ಏರಿಳಿದು ತಣಿದು ತೆರೆಸಿದವು ಒಳಗಣ್ಣನು.

ಅಲ್ಲಿ ಏರು ಇಳಿತಗಳಿಲ್ಲ, ಕೀಳು ಮೇಲುಗಳಿಲ್ಲ
ತಂಪಿಲ್ಲ ಬಿಸಿಯಿಲ್ಲ ಹಗಲು ರಾತ್ರಿಗಳ ಭೇದವೂ ಇಲ್ಲ;
ದ್ವೇಷ ರೋಷಗಳಿಲ್ಲ, ಆಶೆಗಳ ಸುಳಿವಿಲ್ಲ, ಸಾವಿನ ಭಯವಿಲ್ಲ
ಹಿರಿಕಿರಿಯರಲ್ಲಿಲ್ಲ, ದೂರ ಸನಿಹಗಳ ದ್ವಂದ್ವವೂ ಇಲ್ಲ.

ಕಣ್ಣು ಮುಚ್ಚಿ ಕಣ್ಣು ತೆರೆಯಲು ಇರುವ ಕಾಲಾವಕಾಶ
ಜನನ ಮರಣದ ಮಧ್ಯ ಕಟ್ಟಿರುವ ಆವರಣ ತೆರೆಯುವಂತೆ
ಕಾಯಕದ ಕಾಯಕ್ಕೆ ಚೇತನದ ಕಿಡಿಯೊಂದು ತಾಕಿದಂತೆ
ಕದ ತೆರೆದು ಜೀವನವ ಇಣುಕಿ ನೋಡಲು ದೊರೆವ ಅವಕಾಶ

ಆ ಕಣಿವೆ ಸೃಷ್ಟಿಯ ಸೋಜಿಗವಾದಂತೆ ಈ ಕಣವಿ ಕುವರ
ಕಾವ್ಯ ಸೃಷ್ಟಿಯ ಕಣಜ, ತಣಿಸುವನು ಇಳಿಸಿ ನಮ್ಮೆದೆಯ ಭಾರ.

– ಶಂಕರ ಪಾಟೀಲ

## ಹೊಂಬೆಳಕು ಹಾದಿಗುಂಟ

### ಶ್ರೀಕಾರ

೧

ಅಂದಾರು ಮಂದಿ ಇಂದಿಗೂ;
ಇದು ಧಾರವಾಡದ ಗಾಳಿ
ಅಂದೂ ಅಂದಾರು ಹಿಂದಿನಿಂದ;
ಬಹುಶಃ ಬೇಂದ್ರೆ ಬಳುವಳಿ.
ಇದ್ದೂ ಇದ್ದೀತು ಇದು ಅಷ್ಟೇ ಖರೆ
ಕವಿ ಕೆಲವರ ವಿಷಯದಲ್ಲಿ;
ಆದರೆ ಕೊಂಚ ಭಿನ್ನ
ಈ ಚೆನ್ನವೀರನ ಬಣ್ಣ
ಅಕ್ಕರಗಳಿಗೆ ಜೀವ ಸಕ್ಕರಿಸುವಲ್ಲಿ.

ಹುಟ್ಟಿನಿಂದಲೇ ಬರುತ್ತದೆ ಇಂಥಲ್ಲಿ
ಅಪ್ಪಟಕಾವ್ಯದ ಪ್ರತಿಭೆ:
ಸಕ್ಕರಪ್ಪ ಸುಪುತ್ರ
ಬರಿ ಉಪ್ಪು ಆದಾನು ಹೇಗೆ?

೨

ಕಣವಿ:
ಹೆಸರಿನ ಆಚೀಚೆಯೇ ಅವಚಿದ್ದಾನೆ

---

ಒಂದು ಟಿಪ್ಪಣಿ: ಒಬ್ಬ ಗದ್ಯ ಲೇಖಕನಲ್ಲಿಯ ಬರಹಗಾರನನ್ನು ಮತ್ತು ವ್ಯಕ್ತಿಯನ್ನು ಪ್ರತ್ಯೇಕಿಸಿ ನೋಡುವಷ್ಟು ಸುಲಭವಾಗಿ ಒಬ್ಬ ಪದ್ಯ ಬರಹಗಾರನಲ್ಲಿಯ ಕವಿಯನ್ನು ಮತ್ತು ವ್ಯಕ್ತಿಯನ್ನು ಬೇರ್ಪಡಿಸಿ ನೋಡಲಾಗುವುದಿಲ್ಲ. ಗದ್ಯ ಲೇಖಕ ತನ್ನ ಬರಹ ಹೊರತುಪಡಿಸಿ ಒಬ್ಬ ವ್ಯಾವಹಾರಿಕ ವ್ಯಕ್ತಿಯಾಗಿರುವಷ್ಟು ಸಹಜದಲ್ಲಿ ಕವಿ ಆಗಲಾರ (ಸಂಗೀತಗಾರನೂ ಅಷ್ಟೆ). ಒಬ್ಬ ಕವಿ ಈವರೆಗೆ ಬರೆಯಲಾಗಿರದ ಎಷ್ಟೋ ಉತ್ತಮ ಕವಿತೆಯ ಹೊಳಹು-ತುಣುಕುಗಳನ್ನು ವ್ಯಕ್ತಿಯಾಗಿ ಆತನ ವ್ಯಾವಹಾರಿಕ ಕ್ಷಣಗಳಲ್ಲೂ ಗುರುತಿಸಬಹುದು. ಆತನ ಎಷ್ಟೋ ಚಿಕ್ಕದಾದ ಕ್ರಿಯೆ-ಪ್ರತಿಕ್ರಿಯೆಗಳು, ಮಾತುಕತೆಗಳು, ಎಷ್ಟೋ ಸಲ ನೋಟ ಮಾತ್ರಗಳೂ ಸೂಕ್ಷ್ಮೀಕರಿಸಬಲ್ಲವು ಇದನ್ನು. ಎಂತಲೇ, ವ್ಯಕ್ತಿ, ಕವಿ, ಆ ಪರಿಸರ, ಕಾವ್ಯದ ವಸ್ತು ಈ ಎಲ್ಲ ಒಟ್ಟಿಗೇ ಒಳಗೊಂಡ ಕಣವಿ ಕುರಿತಾದ ಇಲ್ಲಿಯ ಕವಿತೆಯ ಕೆಲ ಸಾಲುಗಳು ಸಂಕೀರ್ಣವಾಗಿರುವುದು ಅನಿವಾರ್ಯವಾಗಿದೆ. — ದೇ.ಸು.

ಇವರ ಆವರಿಸಿರುವ ಕವಿ;
ಹೊಂಬೆಳಕು ಹೊಮ್ಮಿಸಿದ
ಚೆಂಬೆಳಕಿನ ಭಾವಜೀವಿ.

ಬೆಳಕ ಬದಿಯಲ್ಲೇ ಬರೆದಿಟ್ಟಂತೆ ಒರಗಿದೆ
ನಿಸರ್ಗ ನಿರ್ಮಿತ ಕಾವ್ಯ
ಅತ್ತಿಕೊಳ್ಳದ ಕಣವಿ.
(ಇದ್ದಿತ್ತಲ್ಲವೇ ಅಂದು ಅಂದತ್ತಿನಿಗೂ ಅದು
ಅಕ್ಕರದೆರಕ ಹೊಯ್ಯಲೊಂದು
ಅನೌಪಚಾರಿಕ ಮನವಿ)
'ಸೃಷ್ಟಿ ನೋಂತು ನಿಂತಿದೆ'
ಇತ್ತ ಅಡವಿಯಲ್ಲಿ, ಅತ್ತ ಅಕ್ಷರಗಳಲ್ಲಿ;
ಚಾಚಿಕೊಂಡಂತೆ ಸಹೃದಯ ಅಭಿವ್ಯಕ್ತಿ
ಎರಡೂ ಪಡಗಳಲ್ಲಿ.

ಇದ್ದಾರು ಇವರು
ಕಣವಿಯಾಗಿ, ಕವಿಯಾಗಿ;
ಎಂದರೆ ವ್ಯಕ್ತಿ ಮತ್ತು ಉಕ್ತಿ
ಹಾಗಿದ್ದೂ
ಕವಿ ಕಣವಿ ಎಂದರೆ ಆದೀತು
ಒಂದೇ ಒಂದು ದ್ವಿರುಕ್ತಿ

## ಬೆಳಕು ಬೀದಿ

೧

ಕಳೆದುಕೊಳ್ಳುತ್ತಾರೆ ಕೆಲವರು ಬದುಕನ್ನು
ಬರುವ ದಾರಿಯ ಮಧ್ಯದಲ್ಲಿ;
ಬದಿಗಿರಿಸುತ್ತದೆ ಬದುಕು ಹಲವರನ್ನು
ಹಿಂದೆ ಹಾದು ಬಂದ ಹಾದಿಯಲ್ಲಿ.

ಆದರೆ ಇದ್ದಾರೆ ಇನ್ನೂ ಕೆಲವರು
ವೈರುಧ್ಯದ್ವಂದ್ವಯಗಳ ಅತೀತದಲ್ಲಿ
ಹಾದ ಹಾದಿಗೂ ಸಂದ ಬದುಕಿಗೂ
ಖುದ್ದು ಕಾಯುತ್ತಾರೆ
ಪುನರ್ಜನ್ಮ ಒಂದೇ ಬಗೆಯಲ್ಲಿ;
ಮರು ಉಸಿರನಿತ್ತಂತೆ ಮರೆತ ನಿನ್ನೆಗಳಿಗೆ
ಇಂದು ನಾಳೆ ನಾಡಿದ್ದುಗಳಲ್ಲಿ
ಕಣವಿ ಅಂಥವರು ಮಾಡಿದ್ದು ಇನ್ನೇನಿಲ್ಲಿ?

೨

ಕವಿಯೊಳಗಿನ ಕವಿತೆ ಎಂದರೆ
ಬುವಿಯುಸಿರಿದ ಕತೆ;
ಫಲಕ ಸೂಚಿಸುವ ರಸ್ತೆಯ ಮಿತಿ;
'ತೊಟ್ಟಿಲಿನಿಂದ ಚಿತೆ'
(ದಾಟುತ್ತದೆ ಕೆಲವೊಮ್ಮೆ ಕವಿಕಲ್ಪನೆ,
ಚಿತೆಯಾಚೆಯ ಕಲ್ಪಕತೆ)
ರಕ್ತಮಾಂಸ ಸುತ್ತುವರಿದ ಈ ಬಗೆಯ ಬದುಕು ಗದ್ಯ
ಅಕ್ಷರ ಚಿತ್ತಾರದ ಹೃದ್ಯವಾಗುವದೇ
ಕಾವ್ಯವೆಂಬ ಚೋದ್ಯ.
ಬಹುಶಃ ಇದು ಮಾತ್ರವೇ
ಸಾಹಿತ್ಯ ಪೂಜೆಯ ಪಂಚಭಕ್ಷ್ಯ ನೈವೇದ್ಯ.

ಕುತೂಹಲವೇ ಕೇಳುತ್ತದೆ ಖುದ್ದು
ಕೆಲವೊಮ್ಮೆ ಒಂದು ಮಾತು;
ಯಾವುದಲ್ಲ ಇಲ್ಲಿ ಕಾವ್ಯಕ್ಕೆ ಸರಕು?
ಎಲ್ಲೋ ಸೂಸಿದ ತಂಗಾಳಿಯ ತುಣುಕು;
ಎಲ್ಲೋ ಮಿಂಚಿದ ಕೋಲ್ಮಿಂಚಿನ ಸೆಳಕು;
ನೆನಪು ತುಳುಕಿಸುವ ನಿನ್ನೆಗಳ ನಗೆ;
ಇಂದಿನ ಸುತ್ತಣ ನಿರಂತರ ಧಗೆ;
ಹಸುಳೆಯೊಂದರ ಹಸಿವನೇಕಗಳ ನೋಟ
ಅರೆಜೀವದ ಇಲಿಯೊಂದಿಗೆ ಬೆಕ್ಕೊಂದರ ಚಿನ್ನಾಟ,

ನಿಸರ್ಗದ ಸಹಜ ಲೀಲೆ; ತುಟಿಕಟಿಗಳೀಜಾಟ, ಎದೆದುಂಬುವ ಮೈಮಾಟ,
ಹರಿಗಡಿದ ಹೊಳೆ; ಕಪ್ಪು ಆಗಸದ ತಾರಾಮಾಲೆ;
ಕರಿಯ ಕಾರ್ಮೋಡಗಳ ರುದ್ರಲೀಲೆ,
ಗುಂಗು ತಬ್ಬುವ ಹಾಡಿನ ಸದ್ದು, 'ಕೋಲು ಕೋಲೆನ್ನ ಕೋಲೆ';
ಇದ್ದೀತು ಹೀಗೇ
ಬದುಕಿನ ಒಂದೊಂದು ತುಣುಕು;
ಯಾವುದಲ್ಲ ಇಲ್ಲಿ ಕಾವ್ಯಕ್ಕೆ ಸರಕು!
ವಸ್ತುವಾಗುವುದು ಸ್ವಾಭಾವಿಕವಿಲ್ಲ
ಎಲ್ಲ ಕತ್ತಲೆ ಮತ್ತು ಬೆಳಕು.
ಹುಟ್ಟು ಸಾವು ಮಧ್ಯದ ಸಂಬಂಧ ಸಾವಿರಗಳು
ಹಾಕಿವೆ ಎಲ್ಲದಕ್ಕೂ ಬೆಸುಗೆ,
ನಿರಂತರ ತಳಕು.

ಮೊನ್ನೆಯ ಮರಣ ಕೆಲವುಗಳ ಕಿಟ್ಟಿಕ್ಕುವ ಗುಣುಗುಣು
ರುದ್ರ ನರ್ತಿಸಿವೆ ನಿನ್ನೆ ಆಗಸದೆತ್ತರ;
ಕೆಂಡ ಕುದ್ದಿದೆ ಕೆಲ ಹೃದಯದಲ್ಲಿ
ಅಮಾಯಕದ ನೂರು
ಅಸಹಾಯ ಮರ್ಮರ.

ಹಾಗಿದ್ದೂ ಸಾವಿನ ಠಾವು ಆಚೆಗಿಟ್ಟು ಇಂದು
ಮತ್ತೆ ಮತ್ತೆ ಮರು ಹುಟ್ಟುತ್ತದೆ,
ಇನ್ನಷ್ಟು ಉತ್ತಮ ಕವಿತೆ;
ಮರಣ ಮರೆತ ಜೀವ ಮಾತ್ರದ ಅನುರಣನ
ಇಲ್ಲಿಯ ನಿರಂತರ ಗಾಥೆ.

ಎಂತಲೇ,
ಬಳ್ಳಿಯಲಿ ಬೆಳಗು ಬೈಗು ಮಾತ್ರದ ಹೂವು
ತಳೆದಿದೆ ಅಕ್ಷರದಲ್ಲಿ ಅನವರತ ರೂಹು;
ಶಿಶಿರದಲ್ಲೂ ಎಲ್ಲೋ ಸೊಲ್ಲಿಸಿದೆ
ಕೋಗಿಲೆಯ ಕುಹೂ ಕುಹೂ.

ಚಲನೆಯ ನೆಲ ಮಾತ್ರವೇ ನಿಶ್ಚಿತ
ನಿರಂತರ ನಡೆವಿಗೆ;
ಆಗಸವೆಂಬುದಾದರೂ ಎಲ್ಲಿದೆ,
ನೀಲ ಭ್ರಮೆ ಮಾತ್ರ ನೆದರಿಗೆ.

೩

ಚಿತ್ರಯೋಗ್ಯ ಪಾತ್ರ ಎಲ್ಲಕ್ಕೂ
ತಕ್ಕ ಹರಿವ ಪಾತ್ರ;ಪುನರಾಭಿನಯದ ರಂಗಮಂಚ;
ಇಂಬು ಪಡೆದಿದ್ದಾನೆ ಇಲ್ಲಿ
ಎಲ್ಲೋ ಇದ್ದ ಕೆಲಸಿಗರ ಕೆಂಚ
ಮಾನಪ್ಪ ಮಲ್ಲಣ್ಣರೊಟ್ಟಿಗೇ
ಮೂರ್ತ ಮಾಡಿದ್ದಾನೆ
ಮಾದರ ದುರುಗ.
ಬಿಸ್ಮಿಲ್ಲರ ಶಹನಾಯಿ ಸನಿಹವೇ ಸುಳಿದಿದ್ದಾನೆ
ಎಮ್ಮೆಯನ್ನೇರಿ ಬಂದ
ಕೊಳಲಿನ ನಿಂಗ.

ಪೈ ಪಂಜೆ ಬೆಂದ ಬೇಂದ್ರೆ
ಕುವೆಂಪು ಶಾಸ್ತ್ರಿಗಳಂತೂ ಸೈಯೇ ಸೈ;
ಆಗ ಮೂಡಿದ ಮಗಳೊಂದಿಗೆ ಹಾಕಿದ್ದಾಳೆ
ಈಗಿನ ಮೊಮ್ಮಗಳೂ ಕೈ ಮೇಲೆ ಕೈ.

ಮೂಲೆಯಲ್ಲೆಲ್ಲೋ ಮೌನ ಮಲಗಿದ್ದಾನೆ
ಮೊನ್ನೆಯಾಚೆಯ ಮನು;
ಅಂಗಳ ಹಿತ್ತಿಲವೆರಡೂ ಕಡೆ ತೆರೆದಿದ್ದಾನೆ
ತನ್ನ ಎರಡೂ ಮುಗ್ಧ ಕಣ್ಣು.

ಕಾವ್ಯದಲ್ಲೂ ಕಂಡಿದ್ದಾನೆ ಕವಿಯಿಂದ
ಕೊನೆಯ ಎರಡು ಹಿಡಿ ಮಣ್ಣು;

ಮಣ್ಣ ಹಣತೆ ಮಣ್ಣಿಗಿಟ್ಟ ಮೇಲೆ
ಏನಿದೆ ಇಲ್ಲಿ ಇನ್ನು?
(ಹಾಗಿದ್ದೂ ಕಂಡಿದ್ದಾನೆ ಇವನು,
ಅಕ್ಕರ ಜೀವಿಸುವ ಶ್ಲಾಘನೆ ಶಾಶ್ವತವನ್ನು.)

೪

ಛಟ್ಟಿ ಇಳಿಸಿದ ಬದುಕು
ತೊಟ್ಟಿಕ್ಕುತ್ತಿದೆ ಜೀವ ಜಲ
ಚೊಕ್ಕ ಚೌಕಟ್ಟಿನ ಸುನೀತಗಳಲ್ಲಿ;
ಅಟ್ಟಿಸಿದಷ್ಟು ಗಟ್ಟಿ ಜೀವದ್ರವ್ಯ
ಪಕ್ಕಾ ಪಾಕ
ಇತರ ಪದ್ಯಗಳಲ್ಲಿ
ಕುದಿಯುವ ಕಾವ್ಯಗಳ ಇಂದಿನ ಒಳಗುದಿ,
ನಾಳೆಯ ಹಸಿರುಗಳಿಗೆ ಅನಿವಾರ್ಯ ತಳಹದಿ.
ಧರ್ಮದ ಧರ್ಮ ತಿಳಿಸುವುದೂ ಕಾವ್ಯದ ಕಾರ್ಯ,
ಮೊತ್ತದ ಮಾನವತೆ ಮಾತ್ರ
ವಸ್ತುಶ್ರೇಷ್ಠದ ಅಂತಿಮ ಗುರಿ.

೫

ಸೀಳುವದಿಲ್ಲ ಸಾತ್ವಿಕ ಕವಿ
ಕೂದಲಿನ ಪದರುಗಳನ್ನು;
ಸೀಳುತ್ತಾನೆ ಸುಳ್ಳು ಭಂಗಿಗಳ
ಟೊಳ್ಳು ಟೋಪನ್ನುಗಳನ್ನು.

ಸತ್ಯದ ಸಂಗ್ರಹ ತತ್ವ
ಕಾವ್ಯೋತ್ತಮದ ಅನಿವಾರ್ಯ ಸತ್ವ;
ಸಾರ್ಥ ಜೀವ ಸಾಕ್ಷಿಯ ಬೆಂದಗ್ಗೆಯ ಛವಿ;
ಬೆಳಕ ಜೀವಿಯ
ದೀಕ್ಷೆ ಹೊತ್ತ ಕವಿ.

ಕಡೆಯುತ್ತಾನೆ ಕವಿ ಕಾವ್ಯ ಕಡಗೋಲಲ್ಲಿ
ಕೊನೆಯರಿಯದ ಆಳ ಬದುಕು;
ಕೊಡುತ್ತದೆ ಕವಿತೆ ಬಿಳಿ ಬೆಣ್ಣೆಯಂತೆ
ತೇಲಿ ತೊಳಗುವ ಶಾಶ್ವತ ಬೆಳಕು.

ಸಾರ್ಥಕ ಹೊತ್ತು ಹೂಡುವ ಕವಿ
ಒಂದು ಸುಂದರ ತೋಟದ ಸಭ್ಯಮಾಲಿ;
ಉಕ್ಕಿಸುತ್ತಾನೆ ನಿತ್ಯವೂ ನೂರೊಂದು ಜೀವ,
ಪ್ರಾಣ ತಂಪೆರೆಯುತ್ತದೆ ಕಾವ್ಯದ ಕಪ್ಪಲಿ.

ಬೇಕೇ ಇಲ್ಲ ಇಲ್ಲಿ
ಬೇರೊಂದು ಬಗೆಯ ಪ್ರಾರ್ಥನೆ;
ಒಪ್ಪಿ ಅಪ್ಪಿದರೆ ಸಾಕು
ನಿಸರ್ಗದ ನಿಸ್ಪೃಹ ಕರುಣೆ,
ಹಸಿರು ಹೊದ್ದಂತೇ ಸ್ವೀಕರಿಸುತ್ತಾನೆ ಖುದ್ದು ಆ ದೇವ
ಜೀವವೆಲ್ಲದರ ನಮ್ರ ನಿವೇದನ.

## ಉಪಸಂಹಾರ

೧

ಹೊಂಬೆಳಕು ಹಾದಿಗುಂಟ
ಅದೇ ಜೆಳ್ಳಿ, ಅದೇ ಚಿನ್ನ;
ಜತನ ಕೂಡಿ ಕಾಯುವ ನಿಧಿ
ಕನಿಷ್ಠ ಕೆಲವು ಶತಮಾನ.
ಉದ್ದಕ್ಕೂ ಹಬ್ಬಿದ್ದು
ಸುರಿದ ಹೂಗಳ ಸಾಲು ಕಮಾನ,
ವರುಷವಿಡಿ ಕೇಳಿದಂತೆ
ಕೋಗಿಲೆಯದೇ ಕೂಜನ.

ಅನಿವಾರ್ಯ
ಒಂದೇ ಒಂದು ಉದ್ಗಾರ;

ಎರಡೇ ಅಕ್ಷರ ನೀಡುತ್ತದೆ
ಮೂರೂ ಬಗೆಯ ಸಾರ:
ಚೆನ್ನ,

ಈಗಂತೂ ಇಷ್ಟೇ ಸಮಾಧಾನ, ಅವಸರವಿಲ್ಲ,
ಸಾಕಷ್ಟು ದೂರವಿದೆ
ಕಾವ್ಯದ ಕೊನೆಯ ನಿಲ್ದಾಣ.

ತಬ್ಬಿ ಹಬ್ಬುತ್ತಿವೆ
ಹೊಸ ಹೊಸ ಹಂಬು-ಹಂದರ;
ಇನ್ನೂ ಎತ್ತರಗಲಗಳ ಸ್ಥಾನಮಾನ
ಹರಡುತ್ತಿದೆ
ವಿವರ ವಿಸ್ತಾರ ತೂಕಗಳ ಜಗ;
ಇನ್ನೂ ಎಲ್ಲೋ ದೂರ
ಖಚಿತವೆಂಬ ಮೌಲ್ಯಮಾಪನ.

ಈಗಂತೂ
ಹೊಂಬೆಳಕು ಹಾದಿಗುಂಟ
ಹಸಿರು ಉಸಿರುಗಳದ್ದೇ ಸಾಮ್ರಾಜ್ಯ;
ಹೆಜ್ಜೆ ಹೆಜ್ಜೆಯಲ್ಲೂ ಸಲ್ಲುತ್ತಿದೆ ಇನ್ನೂ
ಜೀವ ಪೂಜೆಗೆ ತಕ್ಕ ನೈವೇದ್ಯ,
ಈ ನೆಲಮುಗಿಲು ಮಧ್ಯದುದ್ದ
ಮಣ್ಣಿನದೇ ಮೌನ ಮೆರವಣಿಗೆ;
ಮೌನಕ್ಕೆ ಮೂಡಿದಾಗ ಮಾತು
ಅರ್ಥಕ್ಕೆ ಒಂದು ಸಾರ್ಥಕ ಬೆಳವಣಿಗೆ.

೨

ಬೆಳವಣಿಗೆಯ ಈ ಸಾರ್ಥ
ಕೇವಲ ಪರಾರ್ಥ

ಮುಗಿಯಿತು ಬರೆದಾದ ಮೇಲೆ
ಕವಿಯಾಡುವ ಪಾತ್ರ.
ಬಿತ್ತರಿಸಿದ ಎಲ್ಲವೂ
ಈಗ ಎಲ್ಲರ ಒಂದು ಮಿತ್ರ;
ಎತ್ತಿ ಹಿಡಿದವರದೇ ಇದೆಲ್ಲ,
ಇಡಿಯ ಅಭಿಮಾನ ಮಾತ್ರ.

ಕೆತ್ತಿ ಕೊಡುತ್ತಾನೆ ಕವಿ ಅಕ್ಕರಗಳಲ್ಲಿ
ಒಂದೊಂದೂ ಸುಂದರತಮ ವಿಗ್ರಹ;
ಶ್ಲಾಘನೆಯ ಶಾತಕುಂಭದಲಂಕರಣ
ಶಿಷ್ಟ ಸಮಸ್ತದ ಕನಿಷ್ಠ ಕರ್ತವ್ಯ.

– ದೇಶಪಾಂಡೆ ಸುಬ್ಬರಾಯ

# ಹೀಗಿದ್ದಾರೆ ಕಣವಿ

ಕಣವಿಯವರು ಮೃದುವೆಂದುಕೊಂಡೀರಿ
ರೊಟ್ಟಿಯಂತೆ ಕಟಕೂ ಆಗಬಲ್ಲರಿವರು;
ಕಹಿಯಾದ್ದಕ್ಕೆ ಮುಖ ಕಿವುಚಿಕೊಂಡಾರು
ಆದರೆಂದಿಗೂ ಮುಖ ಪರಚುವುದಿಲ್ಲ;
ಪ್ರಕಟಿಸುವ ವಿಧಾನ ಭಿನ್ನ, ಅದೇನು ಚೆನ್ನ!
ಛೀ ಛೀ ಎಂದುದ್ಗರಿಸಿ ಗೋಣು ತಿರುವಿಯಾರು
ಥೂ,ಥೂ ಎಂದುಗುಳರು, ದಾಕ್ಷಿಣ್ಯಪರರು.

ಇವರ ಕಂದಿದ ಮುಖವನ್ನೆಂದೂ ನೋಡಿಲ್ಲ
ಮಳೆಗೂ ಬಿಸಿಲಿಗೂ ಕೊಡೆ ಸಾಮಾನ್ಯ;
ಕೊಕ್ಕರೆಗರಿಯ ಬಿಳಿಯ ಪೈಜಾಮು,
ನೀಳ ಶರಟು ಅಹ, ಏನು ಕಣ್ಣು ಹೊಳಪು!
ಮಳೆಮಾರಿನ ದಿನದಿ ಹುಟ್ಟಿದ್ದರಿಂದೇನೋ
ಮನದ ಕಾಂಪೌಂಡಿನಲ್ಲಿ ಕಾಮನಬಿಲ್ಲು,
ಕವಿತೆಗಳೊಂದಿಗೆ, ಓದಿದವರೆದೆಯೂ ಒದ್ದೆ.

ನೆಲದಲ್ಲಿದ್ದೂ ಮುಗಿಲ ಧೇನಿಸುವ ಕವಿ,
ಕಲ್ಯಾಣ ನಗರದಲಿ ತೇಲಿದವರು;
ಸಿಕ್ಕರೆ ಶುಭ್ರನಗೆಯಲಿ ಕುಶಲವ ಕೇಳಿಯಾರು
ಸಾಹಿತ್ಯ ಬದಿಗಿಟ್ಟು ಮಾತಿಗೆ ಕಾಯುವರು
ಕಳವಳಕೆ ಕಿವಿತೆರೆದು ತಂದೆಯಂತಾಗುವರು;
ಅಷ್ಟಲ್ಲದೇ ಸದಾ ವಿಪ್ರಲಂಭದಿ ತುಡಿವ ಜೆಡಗಿ
ಬೆಚ್ಚಗಿರಲೆಂದು ನೀಲುವಿಗೊಂದು ಶಾಲು ಕಳಿಸಿದವರು!

– ಕಮಲಾ ಹೆಮ್ಮಿಗೆ

# ಕಣವಿಯವರಿಗೆ

‘ಕಾದ ಹಾಲಿಗೆ ಹೆಪ್ಪನೆರೆವುದು ತುಪ್ಪವಾಗಲಿಕೆಂದೆಯೆ’-
ಇಂತೆಂದವರು,
ಮಥಿಸಿ ಮಥಿಸಿ ಬೆಣ್ಣೆ, ಕಾದು ತುಪ್ಪವಾದವರು
ತೋರಣಗಟ್ಟಿ ‘ಸುಸ್ವಾಗತ’ ಬರೆದವರು
ಸಂಜೆಯೊಳು ‘ನಂಜಿಕೊಳುವವರು’.

ಬೆಳ್ಳಗೆ, ತೆಳ್ಳಗೆ ಮಸ್ಲಿನ್ ಪರದೆಯೊಳಗಣ
ಧಾರವಾಡದ ಮಳೆಗೆ ಕೊಡೆಹಿಡಿದವರು
ಈಗ ಪೀಠಾರೋಹಣ ಮಾಡಬೇಕಂತೆ,
‘ಮೃದು ಮಾತು ಮೂಲೋಕ ಗೆಲ್ಲುವು’ದಂತೆ
ಕೇಳಿ ಸುಖಿಸಿದೆವು ನಾವು,
‘ಕುಸುಬೆ ಹೂವಿನ ಪೀತಾಂಬರ’ವನ್ನೊಮ್ಮೆ
ನೋಡಬೇಕು! ಎನ್ನುತ್ತಾರೆ ಜನ!

* * * * *

ಸಾಲು ಮೆರವಣಿಗೆ,
ಸಾಲು, ಸಾಲು, ಹಿಲಾಲು
ಕನ್ನಡದ ತುತ್ತೂರಿ, ಮರಾಠಿಯ ಕಹಳೆ
ತೆಲುಗು ತಂಬೂರಿ,
ಬೆಳುಗೊಳದ ಗೊಮ್ಮಟ
ಕಲ್ಲಿನಲಿ ಕಲಾ ಮೇಳ,
ಮಧುರ ಹಿಂದೋಳ!

– ಸುನೀತಾ ಶೆಟ್ಟಿ
(೧೫-೫-೧೯೯೬)

## ಕಣವಿಯೊಳಗೇನುಂಟು, ಯಾವ ಬಲ್ಲ?

ಮೃದು ಮಧುರಭಾವ ಸಂಚಯುಗೊಂಡು ನಿಂತಂತೆ
ಅಂಚೆದುಪ್ಪಳ ಮನದ ಭಾವಜೀವಿ,
ಕಸ್ತೂರಿ ಕನ್ನಡಕೆ ಚೆಂಬೆಳಕ ಮುಡಿಸಿದಿರಿ
ಒಳಗೆ ಸುಳಿಯುವ ಭಾವದೆಳೆಯ ನೀವಿ.

ನೆಲಮುಗಿಲನೀಕ್ಷಿಸುತ ಕಾವ್ಯಾಕ್ಷಿಗೊಗೆ ತಂದ
ಶುಭ್ರಶ್ವೇತದೃಷ್ಟಿ ಹೊರಗು ಒಳಗು,
ಮಾತನಾಡಿದರಷ್ಟೇ ಕಾವ್ಯ ಬರೆದರೂ ಅಷ್ಟೆ
ಮೆಲ್ಲಮೆಲ್ಲನೆ ತುಂಬಿದಂತೆ ಬೆಳಗು.

ಹಾಗಲ್ಲ ಹೀಗಲ್ಲ ಹೀಗೂ ಇರಬಹುದೇನೊ
ತೂಗಿತೂಗಿಯೆ ಬರುವ ಶಬ್ದಸೃಷ್ಟಿ,
ನವನವೋನ್ಮೇಷ ನೂರೊಂದು ಭಾವಗಳು
ಸಾವಧಾನದಿ ಸುರಿವ ತುಂಬು ವೃಷ್ಟಿ.

ಮಧುರಚೆನ್ನರ ಕುರಿತ ಜೀವಜೀವದ ನಂಟು
ಕಣ್ಣುಮುಚ್ಚುವ ಭಾವಲಿಂಗದಚ್ಚು,
ಒಳಗೆ ಎಲ್ಲೋ ಕುಳಿತು ನಿತ್ಯ ಕಟ್ಟಾಡಿಸುವ
ಬೇಂದ್ರೆಯೆಂದರೆ ನಿಮಗದೆಷ್ಟು ಹುಚ್ಚು.

ಹೂವು ಕಂಡರೆ ನಿಂತು, ದುಂಬಿಕಂಡರೆ ನಕ್ಕು
ಕಾವ್ಯಪೇಟಕೆ ತೀಡಿ ಗಾಳಿಗಂಧ,
ಕಾರಖಾನೆಗೂ ಚಿತ್ತ ಮತ್ತೆ ಗುಡಿಸಲಿನತ್ತ
ನಿತ್ಯ ಜೀವಧ್ವನಿಗೆ ಕಾವ್ಯ ಬಂಧ.

ಕಣ್ಣು ಹರಿಯುವ ತನಕ ಬರಿದಾದ ಬೋಳುಮರ
ನಗರದಲಿ ನೆರಳನ್ನು ಕಾಣದವರು,
ಅಂದಿನಿಂದಿಂದಿಗೂ ನಮ್ಮ ಹಳ್ಳಿಯೆ ಚೆಂದ
ಎನುತ ನೆನಪಿನ ತೇರನೆಳೆಯುವವರು.

ವಿಶ್ವಭಾರತಿಗೆ ಕನ್ನಡದ ಆರತಿಯೆತ್ತಿ
ಮಂಗಳದ ಜಯಭೇರಿ ಬಾನತುಂಬ,
ಮಧುಚಂದ್ರ, ಎರಡುದಡ, ಜೀನಿಯಾ ಸಾಲಾಗಿ
ತುಂಬಿದವು ಕನ್ನಡಕೆ ಅಮೃತ ಕುಂಭ.

ಆಕಾಶಬುಟ್ಟಿಯಲಿ ಆರದ್ಧಣತೆಯನಿಟ್ಟು
ತೇಲಿಬಿಟ್ಟಿಹ ಬೆಳಕು ನಾಡಿಗೆಲ್ಲ,
ಸದ್ಯ ಕಂಡದ್ದಿಷ್ಟು ಇನ್ನು ಕಾಣದ್ದೆಷ್ಟೋ
ಕಣವಿಯೊಳಗೇನುಂಟು ಯಾವ ಬಲ್ಲ?

– ಶ್ರೀರಾಮ ಇಟ್ಟಣ್ಣವರ

# ನೆಲದ ಸಿರಿ

ಕವಿತೆಗೆ ಜೀವ ತುಂಬುವುದು ಪ್ರತಿ ನಿರ್ಮಿತಿ ಕೆಲಸ
ಬರೆದ ಕವಿತೆಯಂತೆ ಬದುಕುವುದೂ ವ್ರತಸಾಹಸ,
ಎರಡು ಕರ್ಮಗಳೂ ಹೂವರಳಿದಷ್ಟು ಸಹಜ ಬಂಧುರ
ಕಲ್ಯಾಣನಗರದ ತಪ ನಿರತ ಚೆಂಬೆಳಕ ಕಾವ್ಯಯೋಗಿಗೆ.

ಹೊಂಬಳದ ನಾಡಿಂದ ಹೊಂಬೆಳಕನರಸಿ ನಡೆದದ್ದೊಂದೇ ದಾರಿ
ನವೋದಯದ ಗುಡ್ಡ ಗಿಡಬಳ್ಳಿ ಹೂದೋಟ ನದಿ ಝರಿ
ತಾರೆ ಚಂದ್ರರ ದಾಟ ನವ್ಯದ ಸಂಕೀರ್ಣ ಬೀದಿಯಲ್ಲೂ
ಬಂಡಾಯದ ಬೆಂಕಿ ಹಾದಿಯಲ್ಲೂ ಪ್ರೀತಿ ಬಿಡದ ಧಾಟಿ.

ಶ್ರಾವಣದ ಮುಗಿಲ ಸೆಳಕುಗಳುದುರಿದರೆ ಭೂಮಿ ನವಿರು
ಎದೆಯ ಮಲೆಯಲ್ಲಿ ಗರಿಬಿಚ್ಚಿ ನರ್ತಿಸುವ ನವಿಲು.
ಮಳೆಯ ನೂರು ಲೀಲೆಗಳೆಲ್ಲ ಹಾಡಾಗಿ ಹರಿದ ಪರಿ
ನುಡಿ ತುಂಬಿ ಅರುಳುವ ಧನ್ಯತೆ ಹಸಿರಾದ ಪ್ರಕೃತಿ ನಾರಿ.

ಕೈಗೆ ಸಿಕ್ಕರೆ ಕಾಲನ ಚಚ್ಚುವ ಸಲಿಗೆ ಬೆರಗಿನೊಡನೆ
ಕೊನೆ ನಿಲ್ದಾಣದೆಡೆ ಬಿಡದೆ ಓಡುವ ರೈಲಿನ ಸೂಚನೆ
ವಿಶಾಲ ಆಕಾಶದ ನಂಬಿಕೆಯಡಿ ಅರಳಿ ಕಂಪಿಸುವ
ಸುನೀತ ಶಿಲ್ಪಗಳು ಸಾರ್ಥಕ ಜೀವಗಳ ಸುಂದರ ಕೆತ್ತನೆ.

ಮಾಯೆಗೆ ಮುನಿಸದ ಅಮಿತ ಪ್ರೇಮ, ಬದುಕಿನ ಪಾಡು
ನೊಂದ ಎದೆಗಳೊಡನೆ ಸದಾ ಬೆರೆವ ಅನುಕಂಪ ಝರಿ.
ಒಳಿತಿನ ಛಂದದಿ ಬರೆದ ಜೀವ ಮೂಲದ ದಿವ್ಯಹಾಡು
ಸುವಿಶಾಲ ಬೆಳೆದ ಜೀವವೃಕ್ಷ ಜೀವಧ್ವನಿ ನೆಲದ ಸಿರಿ.

ಮಾತು ಬೆಳ್ಳಿ: ತೂಕಮಾಡಿಟ್ಟ ಹಾಗೆ ಬಿಟ್ಟ ಬಾಣದ ಬಗೆ
ಮರುಕ್ಷಣ ಮೌನ: ಬಂಗಾರದುಸಿರು, ಸೂಸುವ ನಸುನಗೆ,
ವಿಷಾದ ಬೂದಿಯೊಳು ಬೆಚ್ಚಗೆ ಜಾಗ್ರತಿ ಕೆಂಡದ ಕಾವು
ಚುಚ್ಚಿ ವಿಡಂಬನೆ ಚಾಟಿ ಏಟು ಸಮಾಜ ಭೈರವನಿಗೆ.

ವಿಶ್ವಭಾರತಿಗೆ ಎತ್ತಿ ಕನ್ನಡದಾರತಿ, ಮನೆ ಬೆಳಗುವ
ನಂದಾದೀಪಕ್ಕೆ ಕುಂದೊದಗಿದರೆ ಕನಲಿ ನಿಲ್ಲುವ ಕಲಿ.
ಮಣ್ಣಿನ ಮೆರವಣಿಗೆಯ ನಡುವೆಯೂ ಹಿಂಗದ ಅನುಭಾವ
"ಬದಲಾವಣೆ ಬಾಳಿನೊಗ್ಗರಣೆ" ಚಲಿಸುವ ಸ್ನೇಹಗಾಲಿ.

– ಜಗದೀಶ ಮಂಗಳೂರಮಠ

# ಸಂಚಿಲ್ಲದ ಮುಂಗಾರು ಮಿಂಚು

ಬಾನಿನ ಬಿಸಿಲುಂಡು
ಧಗೆಯಲ್ಲಿ ನಗೆಸೂಸಿ
ಮೈತುಂಬ ಕೇಸರಿ ಧರಿಸಿ ನಿಂತ,
ಧ್ಯಾನಸ್ಥ ಗುಲ್‌ಮೊಹರ್ ಸಂತ-
ಕಣವಿ ಮಹಂತ.
ಇಳಿವಯಸ್ಸಿನ ಈ ಎಳೆಯ-
ತುಟಿ ಬಿಚ್ಚಲು
ಮೌನದ ಬಳ್ಳಿಗೆ ಮಾತು ಹೂತು
ವಸಂತಾಗಮನದ ಸಂಭ್ರಮ,
ಸಂಚಿಲ್ಲದ ಮುಂಗಾರು ಮಿಂಚು ನಗುವಿನ
ಶಬ್ದದಾಚೆಯ ಈ ನಿಶ್ಯಬ್ದ ಶಿಲ್ಪಿಗೆ
ಸಾಹಿತ್ಯವೇ ಧರ್ಮ,
ಅದುವೇ ಅರ್ಥ-ಕಾಮ
ಚಿರಂತನ ದೀಪ್ತಿಧಾಮ.
ಬದುಕಿನ ಪಾಡೇ ಹಾಡಾಗಿ ಪಲ್ಲವಿಸಲು
ಜೀವನದ ರಾಗ-ಅನುರಾಗ
'ನೆಲಮುಗಿಲು' ಒಂದಾಗಿಸಲು
ಇವರ 'ಜೀವಧ್ವನಿ' ಸಾನೆಟ್ಟಿನ ಮೆಟ್ಟಿಲೇರಿ,
ಆಕಾಶಬುಟ್ಟಿಯ ತುಂಬ 'ಮಣ್ಣಿನ ಮೆರವಣಿಗೆ'
ಮಾಡಿತು ಹೊಂಬೆಳಕು ಚೆಂಬೆಳಕು ದಶದಿಕ್ಕಿಗೆ ತೂರಿ
ಮುಪ್ಪಿಲ್ಲ ಅದಕೆ;
ನಿತ್ಯ ನೂತನ
ಸಾವಿರದ ಕವಿತೆಯ ಕವಿಗೆ ನನ್ನ ನಮನ.

– ಜಂಬಣ್ಣ ಅಮರಚಿಂತ

## ಚೆಂಬೆಳಕಿನ ಹನಿಗಳು. . . !

೧

ಮಾತಿಗೆ ಕವಿ ಜತೆ
ಒಳಹೋಗಿ ಕೂತಾಗ
ಚೆಂಬೆಳಕನ್ನು;
ಸ್ನಾನ ಮಾಡಿದಂತೆ
ನಾವೆಲ್ಲ ಹುಣ್ಣಿಮೆಯ
ಬೆಳದಿಂಗಳನ್ನು!

೨

ಅದೆಂಥ ಕೋಮಲ
ಅದೆಷ್ಟು ಮೃದು
ಗುಣವಿದೆ ಈ ಹತ್ತಿಗೆ;
ಇದೆ ಗುಣ
ದೇವರು ತುಂಬಿದ್ದಾನೆ
ಕಣವಿಯವರ ಮಾತಿಗೆ!

೩

ನಗು ಮೊಗದ ಕವಿ ಕಣವಿ
ಬಲು ಸಮಾಧಾನಿ
ಅವರಿಗೆ
ಎಳ್ಳನಿತು ಇಲ್ಲ ಸಿಟ್ಟು;
ಹಾಗೆಂದೆ
ಎಲ್ಲ ಪ್ರಾಯದವರಿಗೆ
ಅವರು ರುಚಿಕರ ಬಿಸ್ಕತ್ತು!

೪

ನಿಸರ್ಗ ಪ್ರೀತಿ-ಪ್ರೇಮ
ಬದುಕು ಭಾಷೆ
ಎಲ್ಲ ಕೃಷಿಮಾಡಿ,
ಕಾವ್ಯಲೋಕದಲ್ಲಿ
ಕವಿ ಶ್ರೀ ಚೆನ್ನವೀರ ಕಣವಿ;
ನಮಗಾಗಿ ಒಟ್ಟಿದ್ದಾರೆ
ಬಲು ದೊಡ್ಡ ಬಣವಿ!

೫

ಸುನೀತಗಳಲ್ಲಿ
ಸಮರ್ಥವಾಗಿ ಕಟ್ಟಿದ
ವ್ಯಕ್ತಿ ಚಿತ್ರ
ನೋಡಬೇಕೆಂದರೆ
ನೀವು ಬರಬೇಕು
ಕಣವಿಯವರ ಹತ್ತಿರ!

೬

ಕೆಲವರಿಗೆ
ಬಾಳಬಟ್ಟೆ ಹಸನಾಗಲು
ಕಾಶಿ ರಾಮೇಶ್ವರ
ಬದರಿ;
ಇನ್ನು ಕೆಲವರಿಗೆ
ಕಣವಿ ಅಂಥವರ
ಶುಚಿ ರುಚಿ ಬದುಕು
ಒಳ್ಳೆಯ ಮಾದರಿ!

– ಅಶೋಕ ಚೊಳಚಗುಡ್ಡ

# ಸಭ್ಯತೆಗೆ ಅನ್ವರ್ಥ

ಈ ಮಾತು ಇಂದಲ್ಲ ತೀರ ಹಿಂದಿನದು
ಮೂರು ದಶಕದ ಮೇಲೆ ಐದು ವರುಷದ್ದು,
ನಾನಾಗ ಲಂಗ-ದಾವಣಿಯ ಕಾಲೇಜು ಹುಡುಗಿ
ಕಣ್ಣುಗಳ ತುಂಬೆಲ್ಲ ಕನಸು ತುಂಬಿದ ಬೆಡಗಿ.

ಅಂಚೆಯವ ಕೊಟ್ಟ ಗೆಳತಿಯ ಪ್ರೀತಿಯ ಪತ್ರ
ಶಿರಸಿಯಲಿ ಕವಿಗೋಷ್ಠಿ ಬರುವರು ಕಣವಿ,
ಧೂಳು ತುಂಬಿದ ತಗ್ಗು-ದಿನ್ನೆಯ ದಾರಿ
ಮೂರು ಗಂಟೆ ಕಠಿಣ ಪಯಣದ ದಾರಿ
ಡಾಂಬರಿಲ್ಲದ ದಟ್ಟ ಅಡವಿ ದಾರಿ.

ಓಡೋಡಿ ಬಂದಿದ್ದೆ ತೀರ ತಡವಾಗಿ
ನನಗೊಂದು ಸ್ಥಳವಿಟ್ಟು ಕಾದಿದ್ದರು ಗೆಳತಿಯರು.
ಕವಿಗೋಷ್ಠಿ ತಲುಪಿತ್ತು ಮುಗಿವ ಹಂತಕ್ಕೆ
ನಾ ಮೆಚ್ಚಿದಾ ಕವಿಯ ಕವನ ಕೇಳದುದಕೆ
ಕಣ್ಣ ತುಂಬೆಲ್ಲ ತುಂಬಿ ಕಣ್ಣೀರು ಹರಿದಿತ್ತು.

"ಅಷ್ಟು ಕವಿಗಳ ನಡುವೆ ಹೇಗೆ ಗುರುತಿಸಲೆ ಗೆಳತಿ?"
ಕೇಳಿದೆನು ಹೇಳಿದಳು ಅವಳು:
"ಸೆಟ್ಟು ಹಾಕಿದ ಹಾಗೆ ಶಿಸ್ತಿನಿಂದಲಿ ಕುಳಿತು
ಫಕ್ಕನೆ ನಗಲು ಮುತ್ತು ಉದುರಿದ ಹೊಳಪು
ಅಚ್ಚಮಲ್ಲಿಗೆ ದಂತ ಪಂಕ್ತಿಗಳ ಒಡೆಯ
ಮುಟ್ಟಿದರೆ ಮುನಿ, ನಾಚಿಕೆ ಮುಳ್ಳು.

ಸ್ನೇಹ ಸೂಸುವ ಕಣ್ಣು, ಜೇನ ಹನಿ ಸವಿ ಮಾತು
ಪಾರಿಜಾತದ ಹಾಗೆ ಮೃದು-ಮಧುರ ಹೂಮನ
ಕೋಮಲಕೂ ಕೋಮಲ ಈ ಕವಿಯ ವದನ"

ಹೇಳಿದೆ ಗೆಳತಿಗೆ ಅಲ್ಲೆ ಬಹು ಮೆಲ್ಲಗೆ
"ಚೆನ್ನವೀರನ ಹೆಸರೇನೋ ಚೆನ್ನ

ಬರಿಯ ಚೆನ್ನನೆ ಸಾಕು ವೀರ ವಿತಕೆ ಬೇಕು
ಇವನಲ್ಲ ವೀರ ಕೋಮಲನು ತೀರ,
ಗಡಿಬಿಡಿಯ ಗೊಂದಲದ ಕವಿಯಲ್ಲ ಈತ
ಸಭ್ಯತೆಗೆ ಅನ್ವರ್ಥ ನಾಮ, ಸೌಮ್ಯ ಸುಕುಮಾರ ಸೋಮ"

ಮತ್ತೊಮ್ಮೆ ಕಂಡಿದ್ದೆ 'ವಿಶ್ವ' ಚೇತನ ದಲ್ಲಿ
ಆಗ ನಾ ಪ್ರೌಢೆ, ಸಡವಳಿಕೆ, ತಿಳುವಳಿಕೆ ಅರಿತ ಗಂಭೀರೆ,
ಒಂಟಿ ಹೆಣ್ಣನು ಕಂಡು ಜೊಲ್ಲು ಸುರಿವರ ನಡುವೆ
ಇವನೊಬ್ಬ ಶಾಂತ ಬುದ್ಧ,
ಎಲ್ಲಿ ಹೋದರೂ ಸಭ್ಯ ಸಂಸ್ಕೃತಿಯ ಮುದ್ರೆ
ಗೌರವದ ಸ್ತಂಭದಂತಿದ್ದ.

ಸಭ್ಯತೆಯ ಗಡಿಯನ್ನು ದಾಟಿದವನಲ್ಲ
ಸಂಸ್ಕೃತಿಯ ಸೋಗಿನಲಿ ವಂಚಕನು ಅಲ್ಲ,
ಮಿತ ಮಾತು, ಹಿತ ಮಾತು ನಗುಮೊಗದ ಈತ
ಎಂದೆಂದೂ ಯಾರನ್ನೂ ನೋಯಿಸಲೆ ಇಲ್ಲ.

ಗಂಭೀರ ಅಧ್ವರ್ಯು, ಎಂದೆಂದೂ ತುಡಿವ ಮನ
ಕನ್ನಡಕೆ ಹಗಲಿರುಳು ಬಿಡದೆ ದುಡಿಯುವುದೆ ಗುಣ,
ಕನ್ನಡಮ್ಮನಿಗೀತ ತುಂಬ ಹೆಮ್ಮೆಯ ಕುವರ
ಕರೆಯಬಹುದೀತನನು ಕನ್ನಡದ ಧೀರ.

ದೊಂಬಿ ಗದ್ದಲದಿ ದೂರ, ಅತಿದೂರ ಚಂದಿಳಕು ಭವನದಲಿ ಕುಳಿತು
ಇವ ಹೊತ್ತಿಸಿದ ಜ್ಞಾನದೀವಿಗೆಯ ಬೆಳಕು,
ಆ ದೀಪ ಉರಿದುರಿದು ಬೆಳಕೆಲ್ಲ ಹರಿಹರಿದು
ಮೇರೆವರಿಯಿತು ಜಗದ ತುಂಬೆಲ್ಲ
ಕನ್ನಡಾಂಬೆಯ ಕೀರ್ತಿ ಮೆರೆವ ಮಲ್ಲ.

ನಾನೇನು ಕೊಡಬಲ್ಲೆ ಈ ಕಾವ್ಯ ಸಂತನಿಗೆ
ಕೋಟಿ ಹೃದಯಗಳಲ್ಲಿ ಬೀಡು ಬಿಟ್ಟವಗೆ,
ನನ್ನ ಆಯುಷ್ಯವನು ಕೊಡಲಿ ದೇವರು ಇವಗೆ
ಇವನಿಂದ ಸುಖ-ಶಾಂತಿ-ಸಮೃದ್ಧಿ ಕನ್ನಡಕೆ.

– ಸುಮಿತ್ರಾ ಹಲವಾಯಿ

# ಮಾಗಿದ ಪಾಡು

ನವೋದಯ ಗುಣ
ಶಬ್ದ ನಾದ ಲಯಗಳ ಸತ್ವ
ಕಾವ್ಯಶೈಲಿ
ಪ್ರಭುತ್ವ.

ಕೈಯಾಡಿದ್ದು ಸುತ್ತ
ಮೇಲೆ ಕೆಳಗೆ
ಮತ್ತೆಲ್ಲ ಕಡೆಗೆ,
ಒಂದಕ್ಕೇ ಅಂಟಿ
ಬಾರಿಸಲಿಲ್ಲ ಗಂಟೆ
ಗಡಿಬಿಡಿಗೆ.

ಮಿತವಾದ ಮಾತು
ಹಿತವಾದವೇ ಹೆಚ್ಚು
ಮೆಚ್ಚಬೇಕು
ಎಲ್ಲರಿಗೂ ಅಚ್ಚುಮೆಚ್ಚು.

ಮಾತು ಮಿದುವಾದಂತೆ
ಹದವಾದ ನಡೆ-ಮುದ
ಮುಖಭಾವ ಒಳಗೆ,
ಕಪಟವಿಲ್ಲದ ಮುಗ್ಧ
ಮಗು ಅಡಗಿದ ಭಾವ
ಅಡಿಗಡಿಗೆ.

ದಾರಿಯಂಚಿನ ನಡಿಗೆ
ವಾಕಿಂಗ್ ಸ್ಟಿಕ್‌ಗಿಂತ ದಪ್ಪ
ಏನೂ ಬೇಕಾಗಿಲ್ಲ ಕೈಗೆ
ಮೈಯೆಲ್ಲ ಕವನ ಹೊತ್ತಿಗೆ.

ಮಣ್ಣಿಗಂಟಿಕೊಂಡೇ ಇದ್ದ
ಮೌನಿಗಳನ್ನೂ ಮಾತಾಡಿಸಿದ
ಬಲು ಮಾತುಗಾರನ ಪ್ರಭಾವ
ಪ್ರಬುದ್ಧ ಸ್ವಭಾವ.

ಮೈಗೂಡಿಸಿಕೊಂಡಿದ್ದು
ಸಮನ್ವಯಕೆ ಸಾಕ್ಷಿ
ಸಮೃದ್ಧ ದೆಸೆ ಕಾವ್ಯಾಕ್ಷಿ,
ದಶ ಸಪ್ತ ಸಂವತ್ಸರಗಳ
ಮಾಗಿಯ ಕಾಲದಲ್ಲೂ
ಮುಗಿಯದ ಹಾಡು
ಮಾಗಿದ ಪಾಡು.

– ನಿಂಗಣ್ಣ ಕುಂಟಿ

# ಕನ್ನಡ ಚೇತನ

ಸೃಷ್ಟಿಯಲ್ಲಿಯದಲ್ಲಾ ಈ ಕಣವಿ-ಕಂದರ
ಕಣಕಣದಲ್ಲೂ ಕನಸು ಕಾಣುವನು ಈ ಸುಂದರ!
ಬಂದವರಿಗೆಲ್ಲ ಬಾ ಎನುವ ಮಹಾಮಂದಿರ!
ಬಾರದವರಿಗೂ ಆಸೆ ಕೆರಳಿಸುವನೀ ಚಂದಿರ!

ಇಲ್ಲಿಲ್ಲ ಕಾಲು ಜಾರುವ ಭಯದ ಹಾವಸೆ
ಹೆಜ್ಜೆ ಹೆಜ್ಜೆಗೂ ನೆನೆವ ಗುರುಲಿಂಗ ಕಾಪಸೆ
ಬಾಳಕೊರಡು ಕೊನರಿಸುವ ರಸದ ನೆಲೆ-ಸೆಲೆ ಈ ಕಡೆ
ಸಿದ್ಧರಾಮನು ಜಿಗಿದ, ಗುರುಪಾದಪಡೆದ ಸಿರಿ, ಹಿರಿ ಹೆಗ್ಗಡೆ.

ಶಾಂತಾದೇವಿಯ ಕೈ ಹಿಡಿದ ಚೆನ್ನವೀರನ ಬಗೆ ಬಲುಹು
ಮುದ್ದಣ ಮನೋರಮೆಯ ಅರಿವಿನ ಒಲವಿನ ನಿಲವು.
ನಂಜುಣುವ ಬಂದರವ ತಪ್ಪಿಸಿ, ಜಪ್ಪಿಸಿ ದೋಣಿ ಸಾಗಿದ ಜಲವು
ಚಿರಂತನದಾಹಕ್ಕೆ ಹಿಗ್ಗುತ್ತಿದೆ ಷಟ್‌ಸ್ಥಲವು.

ಕಾವ್ಯಾಕ್ಷಿಪಕ್ಷಿ! ಜೀವಧ್ವನಿಯ ಸಕ್ಕರೆಯ ಕಣವಿ!
ಸಿಕ್ಕಷ್ಟು ಸವಿಯುತ್ತ ಮೈಮರೆಯುವ ಅಕ್ಕರೆಯ ಬಣವಿ!

– ಸಂ.ವಾ.ದ
(ವಾಮನ ಬೇಂದ್ರೆ)

## ಸುನೀತ ನಮನ

ಶ್ರೀಮಂತ ಕನ್ನಡದ ಕಣವಿಗೆ ಈಗ
ಚಿನ್ನದ ಮೆರುಗು, ಸುತ್ತ ಹೊನ್ನ ಬೆಳಕಿನ ಕಿರಣ
ದಿಟ್ಟಿ ನೆಟ್ಟೆಡೆಯಲ್ಲಿ ಜಾಜಿ, ಮಲ್ಲಿಗೆ ಗುಲಾಬಿ
ಒಪ್ಪ ಓರಣದುಡುಗೆ ಮುಗ್ಧ ನೋಟದ ಮಾಟ!
ಎತ್ತರದ, ಬಿತ್ತರದ ಆಳ, ಅಗಲದ ದೃಷ್ಟಿ
ಮಾಸದ ಮುಗುಳು ನಗೆ ನುಣುಪು ಗೆನ್ನೆಯ ಮೇಲೆ,
ಸದುವಿನಯ ಸಾಕಾರ, ಸಜ್ಜನಿಕೆ ಹರಿಕಾರ
ಹದವರಿತು ಅಳವಟ್ಟ ಮೇಲು ನಡೆ ಮೆಟ್ಟಿಲು
ಪ್ರಕೃತಿ ಸೊಬಗಿನ ಸುಗ್ಗಿ ಹಿಗ್ಗಿ ಕಣವಿಗೆ ನುಗ್ಗಿ
ಋತುಮಾನಕನುಸರಿಸಿ ಕಾವ್ಯಕಣದಲಿ ರಾಶಿ.
ಕಡೆದಿಟ್ಟ ಸಾನೆಟ್ಟು ಶಿಲ್ಪ ಗೋಪುರ ಕಳಸ
ನವ್ಯ-ನವೋದಯ, ಸರ್ವ ಸಮರಸದ ಪರ್ವ
ಕಲ್ಯಾಣ ನಗರಿಯಲಿ ಚೆಂಬೆಳಕು. ಬೀರುವ ಕವಿ
ಒಲವು ಚೆಲುವಿನ ಬದುಕು ಕತೆಗಾರ್ತಿ ಜೋಡಿ.

– ಸಿ.ಪಿ. ಹೇಮಗಿರಿಮಠ
(ಶ್ರೀ ಚೆನ್ನ)

# ಕನ್ನಡದ ಕಾವ್ಯಗಣಿ

ಕಣಿವಿಯವರೆ,
ನಡುವೆ ಸೇರಿದ 'ಣ'ತೆಗೆದರೆ
ನೋಡಿ ಈಗ.

ಅಂತೆಯೇ ನಿಮ್ಮ ಕವಿತೆ
ಮುಗ್ಧ ವನಿತೆ,
ಕಣ್ಣಾಡಿಸಿದರೆ ಸೆಳೆತ
ಕಣ್ಣೋಡಿಸಿದರೆ ತುಡಿತ
ಅನುಭವಿಸಿದಷ್ಟೂ ಹಿತ.
ಮಾತೋ? ಸಿಹಿ ನೀರಿನ ಒರತೆ
ಮೈತ್ರಿಯಲ್ಲಿ ಕಾಣದೇನೂ ಕೊರತೆ.
ಮೊಗೆದಷ್ಟೂ ಜೀವಜಲ ಹರಿದಂತೆ
ಮಲ್ಲಿಗೆಯ ಮೊಗ್ಗು ಅರಳಿದಂತೆ
ನಲುನಗೆಯು ಪರಿಮಳ ಬೀರಿದಂತೆ
ಹೊಯ್ದಾಡದ ದೀಪ ಉರಿದಂತೆ
ನಿಮ್ಮ ಕವಿತೆ.

ನಿಮಗೂ ನನಗೂ ಹನ್ನೆರಡು ವರ್ಷಗಳ
ಅಂತರ
ಕಾವ್ಯ ಕೃಷಿಯಲಿ? ಮಹದಂತರ
ಆದರೂ ಬೆನ್ನು ಹತ್ತಿದ್ದೇನಲ್ಲ, ಬೇತಾಳನಂತೆ
ನಿರಂತರ.
ಕರೆದುಕೊಂಡು ಹೋಗಿ,
ಆಗಲಿ ನಿಮ್ಮಂತೆ ಮಾಗಿ
ನಿಂತಿದ್ದಾರೆ ನನ್ನಂಥವರು ಅನೇಕರು ಬಾಗಿ.
ಅದುವೆ ನಿಮ್ಮ ಕಾವ್ಯ ಪರಂಪರೆಗೆ
ಬೇರು, ಕಾಂಡ, ಚಿಗುರು
ಮೊಗ್ಗು, ಹೂವು, ಹಣ್ಣು.

– ಎಂ.ಡಿ. ಗೋಗೇರಿ

## .ಮುತ್ತಿನ ಬೆಳೆ

ನೆಲಕ್ಕೆ ನೋವಾಗದ ನಡೆ, ಇಲ್ಲ ಯಾರೊಡನೆಯೂ ಭಿಡೆ
ನಗುವಾರದ ಮೊಗ ತುಂಬ ಮಗುಮನದ ಮಲ್ಲಿಗೆ.
ಬಾಗಬೇಕು ಹಗೆಯೇ ಭಾವಕ್ಕೆ ನಾಚಿ
ನುಡಿದರೋ ಮುತ್ತಿನ ಹಾರ, ಬದುಕೆಲ್ಲ ಕಾವ್ಯಸಾರ
ಆಕಾಶ ವಿಸ್ತಾರ ನಂಬಿಕೆ, ನೆಲದಗಲದನುಭವ
ಕೊಪ್ಪರಿಗೆ ತುಂಬ ಸದುವಿನಯ.
ನೆಲದ ಲಾಲಿಯ ಸರಕು ಬರಕಿಂದ
ಕಡೆ ಕಡೆದು, ಮೊಗೆ ಮೊಗೆದು ತೆಗೆದು ಕಾವ್ಯನವನೀತ
ಕಾಸಿ ಕರಗಿಸಿ ಹೆರೆದುಪ್ಪ ನೀಲಾಂಜನಕ್ಕೊಪ್ಪಿಸಿದ್ದೇ
ಚೆಂಬೆಳಗು.
ಎರಡೂ ದಡದಲ್ಲಿ ಹಚ್ಚಿಟ್ಟ ಹಣತೆ
ಎರಡರ ಗಡಿದಾಟಿ ಆಚೆ, ಅತ್ತಾಚೆ, ಮತ್ತಾಚೆಯೂ
ಮುಟ್ಟಿ, ಮೃದುಬೆಳಕ ಸವರಿ
ಎಲ್ಲ ಕಾಲಕ್ಕೂ ಸಲ್ಲುವುದು ಹೊಂಬೆಳಗು.
ಪ್ರಕೃತಿ, ಪ್ರೀತಿಯೆದೆ ತುಂಬಿದ ಭಾವಕ್ಕೆ
ನವೋದಯ-ನವ್ಯ-ನವಿರುಗಳೆಲ್ಲದರೊಂದಿಗೂ ನಂಟು.
ಇಲ್ಲವೆನ್ನುವವರಾರು ಸಿಟ್ಟು,
ಆಗಾಗ ಒಗ್ಗರಣೆ ಭಗ್ಗೆನಿಸಿದ್ದೂ ಉಂಟು.
ಆಗಿರಲಿಕ್ಕಿಲ್ಲ ಖಡ್ಗ ಲೇಖನಿ
ಸೂಜಿ, ದಬ್ಬಣವಾಗಿ ಚುಚ್ಚಿದ್ದೇನೂ ಅಲ್ಲ ಗುಟ್ಟು.
ಎಪ್ಪತ್ತರಲ್ಲಿ ಇಪ್ಪತ್ತು ಹಿಂದೆ ಬಿಟ್ಟು
ಮುಂದಿನ್ನೈವತ್ತರ ತುಂಬ
ಉತ್ತಿ, ಹರಗಿ, ಹದಮಾಡಿ
ಬಿತ್ತಿ, ಬೆಳೆದು ಕೊಯ್ಲು ಮಾಡಿ
ಒಟ್ಟಿದ್ದಾರೆ ಮುತ್ತಿನ ಬೆಳೆಯ ಬಣವಿ
ನಮ್ಮ ಪ್ರೀತಿಯ ಕಣವಿ
ಕಣಕೆತ್ತಿ, ಕರಿಗಾಣ ಹೊಡೆದು
ಬಿರುಕು ಮುಚ್ಚಿ, ಸಾರಿಸಿ, ಒಕ್ಕಿ
ತುಂಬಿಕೊಳ್ಳಬೇಕಿದೆ
ನಮ್ಮ ಕಣಜ.

– ಬಸವರಾಜ ಸಾದರ

# ಕೃತಜ್ಞತೆಯೊಂದಿಗೆ

ನನ್ನ ಕಾವ್ಯ ಬೆಳಕು ಕಾಣುವ ಮೊದಲೆ
ಕಣ್ಣು ತೆರೆಸಿ ಹಾದಿ ತೋರಿಸಿ ನಡೆಗಲಿಸಿದವರು ನೀವು.

ರಮ್ಯ ಲೋಕದ ಪದ ಚುಂಬನಗಳ ರೋಮಾಂಚನಗಳಲ್ಲಿಯೇ
ಯೌವನ ತುಂಬಿ ತುಂಬಿ ಕಳೆದು ಹೂವ ಹೂವಿಗೆ ಮುತ್ತಿಡುತ್ತ
ನದಿ ಗುಡ್ಡಗಳ ನಯನ ಮನೋಹರತೆ ಬೆರಗಾಗುತ್ತ
ಮಲೆನಾಡ ಗಂಧ ಗಾಳಿಯಲ್ಲಿಯೇ, ನೆರಳು ಬೆಳಕುಗಳಲ್ಲಿಯೇ
ಹಲವು ಹೊರಳು ದಾರಿಗಳ ಕಂಡವರು ನೀವು,
ಒಲವಿಗೆ ತಕ್ಕಂತೆ ಚೆಲುವಿಗೆ ಮಣಿದಂತೆ
ಕಂಡರಿಸಿಕೊಂಡು ತೃಪ್ತಿಯಲಿ ಬೆಳೆದವರು.

ನವ್ಯದ ಚಿವರು ನಾಟಕ ನರ್ತನಗಳ ಪಾತ್ರ ಕಟ್ಟುತ್ತಲೇ
ಸಮತೆ ಸಂಪನ್ನತೆ ಸಂಸ್ಕೃತಿಯ ಸುಗಂಧ ನಿಶಿಗಂಧವಾಗಿ ಮನವ ಮುತ್ತಿ
ಹಿತ್ತಿಲ ತೋಟದ ಕೈವಲ್ಲರಿ ಕರೆವ ಗುಲಾಬಿ ಗುಲಬಾಕ್ಷಿಯ
ಗೊಂಚಲು ಗೊಂಚಲುಗಳ ಸಪ್ತರಂಗಿನ ಸಂಧ್ಯಾರಮಣಿಯ
ಶೋಕ ವ್ಯಾಕುಲಗಳಲ್ಲಿ ವಾಸ್ತವದ ಸುಕ್ಕುಗಳ ನಿಟ್ಟಿಸಿದವರು ನೀವು
ರಮ್ಯ ನವ್ಯಗಳ ಮಲ್ಲಿಗೆ ಮಂಟಪ, ಲಂಟಾನಾ ಪೊದೆ ಕಂಡವರು.

ಬಯಲು ಸೀಮೆಯ ಬದುಕು ಬಣ್ಣಗಳನ್ನು ಹೂ ಎಲೆಗಳಲ್ಲಿ
ತಿಳಿನೀಲಿ ಕಡು ಕೆಂಪು ರಾಗ ವಿರಾಗಗಳ ಒಳಗೂ
ಬಯಲ ಭದ್ರತೆ ಮಲೆನಾಡ ದಟ್ಟ ಹಸಿರ ಸೊಬಗ ಸವಿಯುಂಡು ಅಲ್ಲಿ ಇಲ್ಲಿ
ಎಲ್ಲೆಲ್ಲೂ ಹಸಿರು ಕುಸರು ಕರೆದು ತಿದ್ದಿ ತೀಡುವವರು.
ಸೂರ್ಯ ಚಂದ್ರರ ಜೊತೆ ಜೊತೆ ಸಂಜೆ ಮುಂಜಾವುಗಳ ವ್ಯಾಕುಲ
ಮನುಕುಲದ ಹಸಿವು ಆತಂಕ ಆನಂದಗಳ ಹಂಚಿಕೊಂಡವರು

ಮಾತು ಮನಸ್ಸಿನಂತೆ ನಯ ನಾಜೂಕ ಕುಸುರು
ಕಡೆವ ಸುನೀತಗಳು, ಎದ್ದ ಬಿರುಗಾಳಿ ಹೇಗಿದ್ದರೂ ಎದೆ ಸವರಿ
ಹೋಗುವ ಮೊದಲೇ ತುಂಬಿದ ತಂಗಾಳಿ ತಂಪಿನ ನೆಲೆಯ
ಅಂತರಂಗದಲ್ಲಿ ಸಿದ್ಧಗೊಳಿಸಿಕೊಳ್ಳುವವರು.

ಇದೇನು ಏರಿಳಿತಗಳಿಲ್ಲದ ಸಮುದ್ರವೇ?
ನದಿಯ ಆಳ ಸಾಗರದ ಹರವು.
ತಿಳಿಯಬೇಕೆಂದವರು ಇಳಿದು ನೋಡಲು ಕಲಿಯಬೇಕು
ಬೆಂಬೆಳಕಿನಡಿ ಚಿತ್‌ಸೂರ್ಯ ಹೊಳೆಯುವುದ ಕಾಣಬೇಕು.

ಹುಟ್ಟುತ್ತಲೇ ಕೆಲವರು ಡೋಲು, ನಗಾರಿ, ಬ್ಯಾಂಡು-ಬಾಜಾಗಳ ಮಧ್ಯೆ
ಕುಣಿತ ಆರಂಭಿಸುತ್ತಾರೆ, ಎಲ್ಲೆಲ್ಲೂ ಕಿವಿ ಕಣ್ಣುಗಳಲ್ಲಿ ನಾವೇ ಎಂದು
ಮನ ಮುಟ್ಟದೇ ಎದೆ ತಟ್ಟದೇ ಕಾಲನ ಗತಿಯಲ್ಲಿ ಹಿಂದುಳಿಯುತ್ತಾರೆ
ಸಂತೂರಿನ ಇಂಪು ಶಹನಾಯಿಯ ಸೊಂಪು ಎದೆಗಿಳಿಸಿದವರು ನೀವು.

ಎಪ್ಪತ್ತರಲ್ಲೂ ಇಪ್ಪತ್ತರಂತೆ
ನಿಮ್ಮ ಕಾವ್ಯ ಹೂ ಅರಳಿದಂತೆ ಸಚೇತನ
ಸಹಜತೆಗೆ ಸಾಣೆ ಹಿಡಿಯುವ ಕೆಲಸ ಯಾರು ಮಾಡಿದರೂ ಅಷ್ಟೇ,
ಆಕ್ರೋಶ ಆವೇಶಗಳಿಗೊಳಗಾಗದ ತಿಳಿಗಾಳಿ ನಿಮ್ಮ ಮನಸು.

ಕಾವ್ಯದ ಅಂಗಾಂಗಗಳ ಚೆಲುವ ನಡಿಗೆಯ ಲಪ ಲವಿಕೆ ಮತ್ತೆ ಮತ್ತೆ
ನೂರು ತುಂಬಿದರೂ ಮೂರರ ಅದೇ ಎಂದಿನ ಮುಗ್ಧತೆ, ಹೂ ಹಣ್ಣುಗಳ
ಪರಿಪಕ್ವತೆ
ನಿಸರ್ಗದ ಸಹಜ ವಿಕಾಸ ಅಂದಿಗೂ ಇಂದಿಗೂ
ಮುಂದೆಯೂ ಉಳಿಸಿಕೊಳ್ಳುವವರು ನೀವು

– ಶೈಲಜಾ ಉಡಚಣ

## ಕಣ್ಣು ಕಿವಿಯ ಕವಿ

ಒಮ್ಮೆ ಕವಿಯನ್ನು ಕಾಣಬೇಕೆಂಬ
ಆಸೆಯಾಯಿತು,
ಕಣವಿಯವರಿದ್ದಲ್ಲಿಗೆ ಹೋದೆ.
ಅಂಕಿತದಲ್ಲೂ ಕವಿ ಇಣುಕುತ್ತಾನೆ
ಸರಳ ಜುಬ್ಬಾ ಪಾಯಿಜಾಮದಲ್ಲಿ ಬಾಹ್ಯಕ್ಕೂ ಕವಿಯೆ ಸರಿ
ಅಂತರಂಗದ ಕವಿಯನ್ನು ತಟ್ಟಿ ಮಾತಾಡಿಸಲು ಯತ್ನಿಸಿದೆ.

ಕವಿ ಅಷ್ಟು ಸುಲಭ ತೆರಕೊಳ್ಳುವವರಲ್ಲ
'ಹೇಗಿದ್ದೀರಿ, ಸೌಖ್ಯವೆ' ಎಂಬಿತ್ಯಾದಿ ಕುಶಲೋಪರಿಯಾದಮೇಲೆ
ಸರ್, ನೀವು ಬಾನೆತ್ತರದ ಕವಿ, ಸಹಜ ಕವಿ, ಪಂಥಾತೀತರು
. . . . ನನ್ನ ಮಾತಿಗೆ ಕವಿಯ ಕಿವಿ ಬಾಡಿತು.
ಕವಿ ಪದ್ಯಗಳಲ್ಲಿ, ಪದಗಳಲ್ಲಿ ಅಡಗಿ ಕುಳಿತಿರುತ್ತಾನೆ.
ಅವ ಸಂಕೋಚಪ್ರಿಯ 'ನಾನು ಕಣವಿ
ಕುಳ್ಳಿರಿ, ಅದು ಇದು ಮಾತಾಡೋಣ
ನಿಮ್ಮ ಮೊದಲನೆಯ ಮಗ ಏನು ಕಲಿಯುತ್ತಾನೆ . . .' ಎಂದರು.

ಒಂದು ಕ್ಷಣ ಬೆಚ್ಚಿದ ನಾನು
ಅವರ ಕೊರಳ ಸುತ್ತುವರಿದಿದ್ದ ಒಂದಿಷ್ಟು ಸಜ್ಜನಿಕೆ
ಮಗುವನ್ನು ನೆನಪಿಸುವ ಅವರ ಕಣ್ಣಿನ ನೋಟ
ಸರಳ ಬದುಕಿಗಿಷ್ಟು ಸಾಕು ಎಂಬಂತೆ
ಸದಾ ತುಟಿಗೆ ಮೆತ್ತುಕೊಂಡಿರುವ ಅಂಟು ನಗು
ಅವರೆದೆಗೊತ್ತರಿಸಿದ ಸ್ನೇಹದೊರತೆಯಿಂದ
ಜಿನುಗುವ ಮನುಷ್ಯಪ್ರೀತಿ ಇಷ್ಟನ್ನೂ
ತರಾತುರಿಯಲ್ಲಿ ಬಾಚಿ ಬಗಲಚೀಲಕ್ಕಿರಿಸಿ
ಹೊರಟು ಬಂದೆ.

ನನ್ನ ತಿಳಿವಿನಂಗಳದಲ್ಲಿ ಆಟವಾಡಿಕೊಂಡಿರುವ
ಪದಗಳಿಗೆ ಇಷ್ಟನ್ನು ತೊಡಿಸಿದರೆ
ಪದ್ಯವಾಗುವುದು ಕಷ್ಟವಲ್ಲ ಎನಿಸಿತು.

ಬುದ್ಧ ನಾನು ದೇವರಲ್ಲ ಎಂದ
ದೇವ ಭಾಷೆಯನ್ನು ಮಾತಾಡಿದ
ಕಣ್ಣಿದ್ದವರಿಗೆ ಕಿವಿಯಿದ್ದವರಿಗೆ
ಕಣವಿ ಮಾತಾಡಿದ್ದು ಕಾವ್ಯವಾಗುತ್ತದೆ.

– ಮೂಡ್ನಾಕೂಡು ಚಿನ್ನಸ್ವಾಮಿ

# ಚೆಲುವಿನ ಕವಿ ತಾ ಹಾಡಲಿ

ಉತ್ತರದ, ಎತ್ತರದ ಹೊಂಬಳದ ಹೊಂಬೆಳಕು
ಆಪ್ಯಾಯಮಾನ;ನೆರಳಿಟ್ಟ ತಂಗುದಾಣ.
ನೆಲ-ಮುಗಿಲ ಲಾಳಿಯಲಿ ನಾದದೆಳೆಗಳ ನೂತು
ಕುಸುರಿಟ್ಟ ರೇಶಿಮೆಯ ನೂರು ಬಣ್ಣ.
ಕಿರುಕವಿಗಳ ಕಾವ್ಯಾಕ್ಷಿಗೆ ಬೆಳಕಿನ ಹಿರಿಯಣ್ಣ.
ಕುಶಲ ಕುಂಚದ ಆಟ ಆ ಬಾನ ತುಂಬೆಲ್ಲ
ಹರಡಿಟ್ಟ ಮೋಡ, ಗಿರಿ, ಬೆಟ್ಟ ಸಾಲು
ಮೌನ ಮೊಗ್ಗೆಗಳೆಲ್ಲ ಒಂದೊಂದೆ ಒಡೆದು
ಪರಿಮಳದ ಹೊಸನೀರು, ಹೂ ಹಾಸು ಬಿಸಿಲು.
ಪಾರಿವಾಳದ ಗುಟುರು ವಿನಯದೆದೆ ಗಟ್ಟಿ
ವಾತ್ಸಲ್ಯ ಧಾರೆಯಲಿ ಆಕಾಶಬುಟ್ಟಿ.
ಭುವಿ ಬೆಳಗಿರೆ ಒಡಮೂಡಿರೆ ಚಿತ್ರಮಾಲೆ ಕಟ್ಟಿ.
ಎಪ್ಪತ್ತಕೆ ಮೂವತ್ತರ ಜೊತೆಗೂಡಲಿ ಹೆಜ್ಜೆ;
ಚೆಲುವಿನ ಕವಿ ತಾ ಹಾಡಲಿ ಮೆಲ್ಲುಲಿಯಲಿ ಗೆಜ್ಜೆ.

– ನರಸಿಂಹ ಪರಾಂಜಪೆ

## ಒಂದು ಸುಂದರ ದ್ವೀಪ

ಚೆಂಬೆಳಕಿನ ಕವಿ ಕಣವಿ
ಎಪ್ಪತ್ತರ ಇಳಿತದಲ್ಲೂ ಅದೇ ಪುಟಿವ ಬುಗ್ಗೆ;
ಬಟಾ ಬಯಲಿನ ಧಗಧಗಿಸುವ ಬಿಸಿಲಿನಲಿ
ಒಂದೀಟು ನಲುಗದ ಮಲ್ಲಿಗೆಯ ಮೊಗ್ಗೆ
ಗಂಟು ಕಟ್ಟೊಗೆದಿಹರು ಎಲ್ಲ ಬೇನೆ, ಬೇಸರಿಕೆ.

ಮೃದುವಾದ ಮಾತಿನಲಿ ಹಿತವಾದ ದೃಷ್ಟಿ
ಪಂಥ ಪಂಗಡಗಳ ಮೀರಿದ ಸಮ್ಯಕ್ ಸೃಷ್ಟಿ,
ಕಾಲಗಳ ತೆಕ್ಕೆಗೆ ಎಂಥೆಂಥದೊ ಸಿಕ್ಕಿಗೆ
ಒಂದಿಷ್ಟು ಸಿಗದೇ
ಎಲ್ಲ ಕಾಲಕು ಸುರಿಸಿಹರು ಆಟೀಟು
ಗುಡುಗು, ಮಿಂಚುಗಳಿಂದ ಸಾಮಗಾನದ ಸೋನೆ.

ಹುತ್ತಗಳಿವೆಯೆಂದರೂ ಸುತ್ತ ಮುತ್ತ
ಆಡಿದವರಲ್ಲ ಮುಂಗಸಿಯಾಟ,
ಗುದುಮುರಗಿ ಗುದ್ದಾಟ ಮೈಲುದ್ದ ದೂರ
ಹಳ್ಳಿಗರ ಬದುಕನೇ ಬೆನ್ನಿಗೇರಿಸಿಕೊಂಡ ಧೀರ
ಕನ್ನಡ ಕಾವ್ಯ ಸಾಗರದ ಒಂದು ಸುಂದರ ದ್ವೀಪ-ದ್ವಾರ.

ಚೆಂಬೆಳಕಿನ ಕವಿ, ಈಗ
ಧಾರಾನಗರಿಯ-
ಗಡಬಿಡಿಯ ಬದುಕಿನಲಿ,
ದೇಶಾವರಿ ನಗೆಯಲಿ
ಎದುರಾದ,
ಎಲ್ಲರ ಕೈಕುಲಕಿ, ಇಲ್ಲಾ ಮೈದಡವಿ
ಬಾಯ್ತುಂಬ ನಗುವ
ಸಮನ್ವಯದ ಸಿಂಧು
ಪ್ರೀತಿ ತುಂಬಿದ ಬಂಧು;
ಇರಲಿ ಎಲ್ಲರೊಂದಿಗೆ
ವರ್ಷ ನೂರೊಂದು.

– ಸತ್ಯಾನಂದ ಪಾತ್ರೋಟ

# ಕಣವಿ ಮನೆ ತೋಟ

## ಒಂದು, ಎರಡು, ಮೂರು, ನಾಲ್ಕು

### ಒಂದು

ಒಂದು ದಿನ ಮುಂಜಾನೆ ಕಣವಿ ಅವರ
ಮನೆಗೆ ಹೋಗಿದ್ದೆ,
ಬಾಗಿಲ 'ಕೀ' ಹಾಕಿತ್ತು.

ಅವರ 'ಕವಿತೆಯ
ಪುಟ್ಟ ಗುಬ್ಬಿ'
ಚಕಮಕಿಸುತಿತ್ತು ಚುಂಚು.

ರಾತ್ರಿ ಸುರಿದ
ಮಳೆಯಲ್ಲಿ ನೆನೆದ
ಗೌರಿ ಹೂ ಎಲೆಯ
ಎದೆ ಮೇಲೆ
ಕೀಟ ದಾಟುತ್ತಿತ್ತು.

ನಕ್ಕ ಚಿಕ್ಕ
ನೀಲಿ ಹೂ ಬೇಲಿಯಲ್ಲಿತ್ತು.
ಜಡೆಗಟ್ಟಿದ ಹುಲ್ಲು
ಕಾಲ ಕೆಳಗೆ.

### ಎರಡು

ಈ ತೋಟದಲ್ಲಿ
ಎಷ್ಟು ಹೂ ಅರಳಿವೆ?
ಎಷ್ಟು ಬೆರಗಿನ
ಬೆಳಗು ಬಂದಿವೆ?
ಧಾರವಾಡದ
ಮಳೆ ಧಾರೆಗಳೆಷ್ಟು
ಬಳ್ಳಿ ಕಂಟಿಗಳ
ಮೇಲೆ ಕುಣಿದಿವೆ?

ಮೂರು

ಈ ಹಕ್ಕಿಗಳು ಕಸಕಡ್ಡಿ
ಹೊತ್ತು ತರಲಿ,
ಕವಿಯ ಕನಸಿನಲ್ಲಿ
ಬೆಚ್ಚನ ಗೂಡು ಕಟ್ಟಲಿ,
ಧಾರವಾಡ
ಮಳೆ ಜೋಕಾಲಿಗಳು
ಹೊತ್ತು ತೂಗಲಿ,
ನಿತ್ಯ
ಕೆಂಪು ಚಹಾ ರಾಡಿ ನೀರು
ಕವಿ ನೋಡಲಿ.

ನಾಲ್ಕು

ಬೇಂದ್ರೆ ಬಿಟ್ಟ
ಬಾಕಿ ಇತಿಹಾಸ
ನೀವು:ಕಣವಿ

– ಸತೀಶ ಕುಲಕರ್ಣಿ

# ಬಾನ ಕನಕ.

ಇತ್ತ, ಪದಕೊಂದು ಪದವಿಯ ಬೇಂದ್ರೆ. ಅತ್ತ, ರುದ್ರ-
ರಮ್ಯ ಗಿರಿಪಂಕ್ತಿಯ ಪ್ರಸ್ತಾರದ ಕುವೆಂಪು. ಮಧ್ಯ
ವಚನ್ನೈಸಿರಿಯ ಮಧುರಚೆನ್ನ. ಸಲ್ಲ ಸ್ಫೂರ್ತರಿಗೆ ಬೆನ್ನ!
ಪ್ರಭಾವದಿ ಮದಡಾಗದ ದೀಪಧಾರಿಯುಕ್ತ ಮಿದುಳು
ಕೌತುಕಪಟ್ಟಕ್ಕೆಂದೋ ಒಪ್ಪು ಒನಪಿನ ಕವಿತ್ವಗಳು
ಚಿಲಕ ಝಿಲ್ ಝಿಲಕ್ಕೆನ್ನಿಸಿದ ಭಾಷೆಗೆ ಹರ್ಷಾಂಲಿಂಗನದ
ಸಿಹಿಯುಡುಗೊರೆ. ವ್ಯರ್ಥ ಗಡಿಮೀರಗೊಡದ ಲಕ್ಷ್ಮಣಗೆರೆ
ಹಾಯಿ ಬಿಚ್ಚಿದ ಚುಕ್ಕಾಣಿಯ ಚೊಕ್ಕ ಬೇಕೆಂದತ್ತತ್ತ ನಿಯಂತ್ರಿ-
ಸುವ ಪುರಷಾರ್ಥಿ. ಸಂಸ್ಕಾರಮಾನ್ಯ ನಂಬದಿರಲಾಗದ
ಪರಮಾರ್ಥಿ. ಆರ್ಜನ ಮಾರ್ದವಂಗಳ ರಮ್ಯ-ನವ್ಯಸೇತು
ಚಿರಂತನ ದಾಹದ ಜೀವಧ್ವನಿಗೆ ಶಿಶಿರಸ್ನೇಹಿ. ಆದರೂ ಮಟ
ಮಟ ಮಧ್ಯಾಹ್ನದ ಮಜಲು ವ್ಯಾಮೋಹಿ. ದೃಷ್ಟಿತಾಗುವ
ಸರಸ-ಸಜ್ಜನಿಕೆ. ಹೆಮ್ಮೆಯಾಗದೇ ನೇಹಾಪು ಮನಮನಕೆ?
ಚೆಂಬೆಳಕು ಸುನೀತಜನಕ. ಹೊಂಬೆಳಕಿಗೆ 'ಬಾರ' ನೆತ್ತದ ಬಾನಕನಕ.

– ರವಿ ಉಪಾಧ್ಯ
(೧೯೯೭)

# ಹೊಡೆದುಂಬಿದ ಹಾಲ್ದೆನೆ

ಸರಳ-ಸೌಜನ್ಯಗಳೆ ಸಾಕಾರಗೊಂಡಂತೆ
ನಯ-ವಿನಯಗಳೆ ಹೊಡೆದುಂಬಿದ ಹಾಲ್ದೆನೆಯಂತೆ
ಭಾವ-ಭಾಷೆಗಳಿಗೆ ರೆಕ್ಕೆಯೊಡೆದಂತೆ
ಮೂಡಿ ಬಂದು ಮನ-ಮನೆಗಳ ತುಂಬ ತುಂಬಿದ ಮಂದಾರ,
ಆಡಂಬರದ ಡೊಂಬರಾಟಗಳ ನಡುವೆಯೂ ನಿರಾಡಂಬರ.
ಚೆನ್ನಕೆ ಒಪ್ಪಿಟ್ಟ ವೀರ, ವೀರಕ್ಕೆ ಓರಣವಿಟ್ಟ ಚೆನ್ನ
ಎಪ್ಪತ್ತು ಗುಡ್ಡದೊಳಗೆ ಹಿರಿದಾದ
ಕಪ್ಪತ್ತು ಗುಡ್ಡದಂತಿವರ ವ್ಯಕ್ತಿತ್ವ,
ಚೆಂಬೆಳಕಿಗೆಂದು ಯಾರೇ ಬಂದರೂ
ಹೊಂಬೆಳಗಿನ ತುಂಬು ಸ್ವಾಗತ
"ಇವ ನಮ್ಮವ ಇವ ನಮ್ಮವ"ಎಂದು
ಬರಮಾಡಿಕೊಂಡು
"ಏನಿ ಬಂದಿರಿ ಹದುಳವೆ"
ಎನುವಾಗಲಂತೂ ಥೇಟ್ ಅಣ್ಣನದೆ ನೆನಪು.
ಇವರ ಮಾತೋ ಬಳ್ಳಿ-ಬಳ್ಳಿಗಳಲಿ
ಮಲ್ಲಿಗೆಗಳು ಮೆಲ್ಲ-ಮೆಲ್ಲನೆ ಬಿರಿದರಳಿದಂತೆ.
'ಬೆಳಗಾಗ ಚಳಿಯೊಳಗೆ ಬಿಸಿನೀರ ಮಿಂದಂತೆ'ವರ ಸಾನ್ನಿಧ್ಯ.
ತೋರಗೊಡದಂತಿರುವ ಹಿರಿಮೆ
ಕಿರಿಯರಿಗೆ ಸದಾ ಚೈತನ್ಯದ ಚಿಲುಮೆ.

ಇವರ ಕಾವ್ಯ-
ನವಿಲುಗರಿಯ ಮೇಲೆ ಸುಂದರ ಸುಮಗಳನು
ಒಂದೊಂದಾಗಿ ಅಂದವಾಗಿ ಜೋಡಿಸಿಟ್ಟಂತೆ,
ಲೇಖನಿಯ ಕುಂಚದಿಂದ ಮಿಂಚಿದ ಚಿತ್ರಗಳು
ಲಿಯೋ-ಎಂಜಿಲೋ ರವಿ ಹೆಬ್ಬಾರರಿಗೆ ಹೊಯ್-ಕಯ್,
ಶಬ್ದದೊಳಗೆ ಟಂಕಿಸಿದ ಇವರ ವ್ಯಕ್ತಿ-
ಚಿತ್ರಗಳಿಗೆ ಅಮರ ಶಿಲ್ಪಿಯದೆ ಛಾಪು.

ಅದಕೆಂದೆ-
ಈ ಸಾನೆಟ್ ಸಾಮ್ರಾಟರಿಗಿಲ್ಲ ಸರಿಸಾಟಿ,
ಅಸ್ತವ್ಯಸ್ತಗಳಿಂದ ಬಹುದೂರ ನಿಂತ ಸಂತ,
ಅಚ್ಚಕಟ್ಟುತನಕೆ ಅಚ್ಚು ಹಾಕಿಸಿದಂತಿವರ ವ್ಯಕ್ತಿತ್ವ.
ನಾಡು-ನುಡಿಯ ಸೇವೆಗಾಗಿ ತಮ್ಮನೆ ಮುಡಿಪಾಗಿಟ್ಟು
'ಹೆಸರಾಯಿತು ಕರ್ನಾಟಕ ಉಸಿರಾಗಲಿ ಕನ್ನಡ'ವೆಂದು,
ಕಹಳೆ ಮೊಳಗಿಸಿದವರು.
ನಾಡಿನೊಳಗೆ ನಡೆದ ಚಳುವಳಿಗಳ ಹೊಳೆಗಳ
ತಮ್ಮೆದೆಗಡಲೊಳಗೆ ಅಡಗಿಸಿಕೊಂಡ 'ಶಾಂತ' ಸಾಗರ;
ಅದರಿಂದಲೆ ಆಳುತಿಹರು
ಅವರಿಂದು ಸಾವಿರಾರು ಸಹೃದಯಿಗಳ
ಹೂ ಹೃದಯಗಳನು.

– ಅಶೋಕ ನರೋಡೆ
(೧೯೯೪)

## ಕಾವ್ಯವೇ ನೀವಾಗಿ

ಗಿಳಿಹಂಸೆ ಕೋಗಿಲೆಯನೊಡಗೂಡಿ ಬೆಳ್ಳಕ್ಕಿ
ಇಳೆಯೊಳಗೆ ಮಂಗಲವ ಹಾಡುತಿರಲು,
'ಹೊಂಬಳ'ದ ಹೊಂಬಯಕೆ ಹೊಗರೇರಿ ನಿಂತಿಹುದು
'ಕಣವಿ' ರೂಪವ ತಳೆದು! ಆಹ ತಳೆದು!

ಕಾವ್ಯವೇ ನೀವಾಗಿ ನೀವೆ ಕಾವ್ಯವು ಆಗಿ
ಮನೆಮನೆಗೆ ಹಚ್ಚಿದಿರಿ ಕಾವ್ಯದೀಪ,
ಭಾವಜೀವನವೆಂಬ ಗೌರಿಶಂಕರವೇರಿ
'ಮಧುಚಂದ್ರ' ನೈತರಲು ಮಧುರ ರೂಪ!

ಕಾವ್ಯದಾ ಕ್ಷೇತ್ರದಲಿ ನೀವು ಬಿತ್ತಿದ ಬೀಜ
ತಾನೀಯಲಾರದೇ ವಿಪುಲ ಬೆಳೆಯ?
ಯುಗಕೊಂದು ಜಗಕೊಂದು ಹೊಸಹಾದಿ ಸಹಜೆಂದು
ಹಾಡಿದಿರಿ ಹರಸಿದಿರಿ ತುಂಬಿ ಕಳೆಯ!

ಸಪ್ತರಾಗದ ಸುಪ್ತಸ್ವರದಲ್ಲಿ ಹಾಡುತಿದೆ
ನಿಮ್ಮ ಜೇನ್ನುಡಿಯನ್ನು ಕಾವ್ಯವೀಣೆ
ಕರುನಾಡ ಬಾಂದಳದಿ ತೆರೆತೆರೆಯಾಗಿ ಬರುತಲಿರೆ
ನಿಂತು ಸಲೆ ಕೇಳುತಿದೆ ಕನ್ನಡ ರಸಿಕಸೇನೆ!

"ನಮ್ಮ ಬಾಳಿಗೆ ಪರಮಪ್ರೀತಿಯೆ ನೆಲೆಗಟ್ಟು
ಪ್ರೀತಿಯೇ ಚೌಕಟ್ಟು" ಎಂದಿರಲ್ಲ!
ಮನುಜ ಬಾಳಿನ ನಂಜಿಗಿದುವೆ ಸಂಜೀವಿನಿಯು
ಇದನರಿಯೆ ಬೇವು ಸಹ ಬೆಲ್ಲವಲ್ಲ!

– ಬಾಳೇಶ ಲಕ್ಷೆಟ್ಟಿ
(೧೯೯೬)

# ಈ ನಮ್ಮ ಕ(ಣ)ವಿ

ಕವಿತೆಯಿಂದಲೇ
ಹೋರಾಡುವ
ಚೆನ್ನ
ವೀರ
ಈ ಧೀರ.

ಬಣ್ಣ ಬಣ್ಣದ
ಕಲ್ಪನೆ ಹೊಂದಿಸಿ
ಕಟ್ಟಿದ ಆಕಾಶ ಬುಟ್ಟಿ
ಆಗಸದೆತ್ತರ ಹಾರಿಸಿ
ಜನಕೆಲ್ಲ ತೋರಿ
ತನ್ನ ಗುರಿ
ಗೆದ್ದ ಮಹತ್ವಾಕಾಂಕ್ಷಿ
ಈ ಕಾವ್ಯಾಕ್ಷಿ.

ಕತ್ತಲಲ್ಲಿ ಸದಾ
ಚೆಲುವ
ಚೆಂಬೆಳಕು ಸೂಸುವ
ಮಧುಚಂದ್ರ ಈತ.

ಮಾತು ಮೃದು
ಮುಗ್ಧ, ಸರಳ
ಕೋಮಲ, ಹಸಿರು
ಮೈ-ಮನ, ಭಾವದಲಿ
ಚಿಮ್ಮುವ ನಗೆಯ ಹೊಸ ಚಿಗುರು.

ಒಳ-ಹೊರಗು ಸರಿ ಸಮಾನತೆ ನಿಲುವು
ಭಾವ ಜೀವಿಯ ಒಲವು,

ಹಬ್ಬಿಹರಡಿದೆ ನೋಡಿ
ಅರಳಿರುವ ಹೂಬಳ್ಳಿ ಮೋಡಿ.

ನಿಸರ್ಗದಲಿ ಸುಳಿದಾಡಿ
ಜೀವ ಜೀವದಲಿ
ಜೀವಧ್ವನಿ ಬಿತ್ತರಿಸಿ
ನೆಲ ಮುಗಿಲನೊಂದಾಗಿಸಿ
ಸ್ಪಂದಿಸುವವರು
ಈ ನಮ್ಮ ಕ(ಣ)ವಿ.

– ಡಿ.ಬಿ. ಧಂಗ
(ಏಪ್ರಿಲ್ ೧೯೯೪)

# ಸೂಕ್ಷ್ಮರಲಿ ಸೂಕ್ಷ್ಮ

೧

ದಟ್ಟಮಾನವ ಪ್ರೀತಿ-
ಕಟ್ಟಿಕೊಂಡ ಪಕೃತಿ-
ಚೆಲುವು ಮಡುಗಟ್ಟಿದ ಆಕೃತಿ
ನಿಮ್ಮ ಕಾವ್ಯ.

೨

ತಟ್ಟುವ
ಮುಟ್ಟುವ
ಕಟ್ಟುವ
ಸೃಜನಶೀಲ ಮನಸಿನರಮನೆ
ನಿಮ್ಮ ಕಾವ್ಯದ ತವರ್ಮನೆ.

೩

ಹೊಸ ಬಂಧ ಕಂದ ಅನುಬಂಧ
ಅನುರಾಗ, ಲಯ ರೂಪಕದ
ಆಲಯ ನಿಮ್ಮ ಕಾವ್ಯಾಲಯ.

೪

ಇಕ್ಕಟ್ಟು ಬಿಕ್ಕಟ್ಟುಗಳಿಲ್ಲದ
ನುಡಿಕಟ್ಟಿನ ಜಾಣ
ಸಾನೆಟ್ಟೇ ನಿಮ್ಮ ಪ್ರಾಣ.

೫

ನೀವು ಕುಳಿತ ಎರಡು ದಡದ
ಮಣ್ಣು ಕಣ ಕಣದಿ
ಅದೋ ಮಣ್ಣಿನ ಮೆರವಣಿಗೆ.

೬

ಅಲ್ಲಿ ಹದಗೊಂಡ ಶಬ್ದಗಳ
ಹುಲುಸು
ಮುದಗೊಂಡ ಭಾಷೆಗೆ ರೂಪಕಗಳ
ಸೊಗಸು.

೭

ಸೂಕ್ಷ್ಮರಲಿ ಸೂಕ್ಷ್ಮ
ಭೀಷ್ಮರಲಿ ಭೀಷ್ಮ.

೮

ಸೋತವರ ಸತ್ತವರ
ಸೊರಗಿ ಕೊರಗಿದವರ
ಕೂಗು ಮೇಘಮಾಲೆಗೂ ಮುಟ್ಟಿಸಿದಿರಿ
ಕಾರ್ತಿಕದ ಮೋಡಗಳ ದಿಟ್ಟಿಸಿದಿರಿ.

೯

ನಗರದಲ್ಲಿ ನೆರಳು ಹುಡುಕುತ್ತ
ಬರಡು ಭ್ರಷ್ಟಗ್ಲೋಬಿನ ಸುತ್ತ
ತಿರುಗುತ್ತ
ಹಾರಿದ ಚಕ್ರವಾಕ ನೀವು!

೧೦

ಕತ್ತಲೆಯಲ್ಲಿ ಬೆಳಕು-
ಹೊತ್ತಿಸಿ ಹಿಡಿದ ದೀಪಧಾರಿ.

೧೧

ಸಾಯುವ ಗುಬ್ಬಚ್ಚಿ ಬಾಯಲ್ಲಿ
ಹನಿ ಹನಿ ನೀರು ಹಾಕುತ್ತ
ಜೀವಧ್ವನಿ ಕೊಟ್ಟ ಕಾವ್ಯ ಖನಿ ನೀವು.

೧೨

ರೆಕ್ಕೆ ಪುಕ್ಕಗಳ ಮೈ ತಿಕ್ಕಿ
ನೇವರಿಸಿ, ಕಾಲ ನಿಲ್ಲಿಸಿ
ಜೀವಪಕ್ಷಿಯ ಹಾರಿಬಿಟ್ಟವರು.

೧೩

ಸ್ನೇಹಕ್ಕೆ ಬೆಲೆ ತಂದ ಕಷ್ಟದ ಬದುಕಿನ
ಶಿಶಿರದಲ್ಲಿ ಬಂದ ಸ್ನೇಹಿತರು ನೀವು.

– ಗವಿಸಿದ್ಧ. ಎನ್. ಬಳ್ಳಾರಿ.

## ಕಣವಿಯವರಿಗೆ ಈಗ ಬರೀ ಎಪ್ಪತ್ತಾ?

ಕಣವಿಯವರಿಗೆ ಈಗ ಬರೀ ಎಪ್ಪತ್ತಾ?
ಎತ್ತರ ನೋಡಿದರೆ ಹಾಗನಿಸುವುದಿಲ್ಲ
ಆಗಿರಬೇಕು ಕನಿಷ್ಠ ಸಾವಿರದ ಎಪ್ಪತ್ತು,
ಅಂದರೆ ಅಷ್ಟೊಂದು ಹಣ್ಣು ಹಣ್ಣು ಮುದುಕರಾ
ಅಂತ ಮೂಗು ಮುರಿಯಬೇಡಿ.

ಅವರು ತೂಕಮಾಡಿ ಇಡುವ ದಾಪುಗಾಲಿನ ಹೆಜ್ಜೆ
ಲೋಕಾ ಅಳೆಯಲು ಹೊರಟ ಕಾಲುನಡಿಗೆಯ ಕಸರತ್ತು
ನಿತ್ಯ ತಾರುಣ್ಯದ ತೋರಣ ಕಟ್ಟುವ
ಕ್ರೀಡಾಪಟುವಿನ ಉಲ್ಲಾಸ ಇವು
ಕಾಲನ ತುಳಿತಕ್ಕೆ ಮುಪ್ಪಾಗುವ ಸಾಧಾರಣ ಸರಕಲ್ಲ.

ಎಲ್ಲವನ್ನೂ ಹೊತ್ತ ಭೂಮಿ
ವೇಗ ಗೊತ್ತಾಗದ ಹಾಗೆ ತಿರುಗುತ್ತದೆ,
ಕಾಲಕ್ಕೆ ಕ್ಯಾಲೆಂಡರ್ ಆಗುತ್ತದೆ;
ಕಣವಿಯವರದು ಈ ಬಗೆಯ ಚಲನೆ
ಆಕಾಶದಲ್ಲಿ ವಿಹರಿಸಿದರು ಮಿಂಚಿ ಮಾಯವಾಗುವುದಿಲ್ಲ,
ಕಣಿವೆಗಳಲ್ಲಿ ಮಡುಗಟ್ಟಿ ಶಿಖರಗಳಲ್ಲಿ ಹೊಡೆ ಹಿರಿಯುತ್ತದೆ.

ಬೆಳಕಿನ ಹಾಗೆ ಏಕಮುಖವಲ್ಲ ಅವರ ನಡಿಗೆ
ಏಳುಬೀಳುಗಳಲ್ಲಿ ಏಳಾಗಿ ಒಡೆದು ಒಂದಾಗಿ
ತೋಳು ಚಾಚುತ್ತದೆ ಭೂಮಿಗಿರುವ ಸಕಲ ಮುಖಗಳೆಡೆಗೆ,
ಸರಳತೆ ಸಜ್ಜನಿಕೆ ಗೆಳೆತನಗಳ ಸುವಿಶಾಲ ವೃಕ್ಷಗಳ
ಹೂವು ಚಿತ್ತಾರಗಳ ಕೊಡೆ ಹಿಡಿದು ನಿಲ್ಲುತ್ತದೆ,
ನೆಲದ ಎದೆಯಾಳಕ್ಕೂ ಅಂತಃಕರಣದ ಬೇರನಿಳಿಬಿಟ್ಟು
ಸಕಲ ವಿಕೋಪಗಳಿಂದ
ಮಣ್ಣಿನ ಕೊರೆತ ತಡೆಗಟ್ಟುತ್ತದೆ ಕಲ್ಲಾಗಿ
ಕಲ್ಲಿನೆದೆಯಲ್ಲೂ ಹುಲ್ಲು ಹೂ ಚಿಗುರಿಸುತ್ತದೆ.

ಹೀಗೆ ಜಡವನ್ನು ಜೀವದೊಂದಿಗೆ ಗುಣಿಸುತ್ತ
ಕಾಲನ ಹಣೆಬರಹ ಬರೆಯಲು ಹವಣಿಸುವ
ಸದಾ ಇಪ್ಪತ್ತರ ಇವರ ಕಾವ್ಯಾಕ್ಷಿ ಕಣ್ಣುಗಳ ದೀಪಾ ಹಚ್ಚಿ
ನೆಲಮುಗಿಲ ಕಣಿವೆಗಳ ಸುತ್ತುತ್ತಾಳೆ
ನೆಲದ ಮರೆಯ ನಿಧಾನಗಳ ಎತ್ತುತ್ತಾಳೆ
ಬಾನಮರೆಯ ಒಗಟುಗಳ ಒಡೆಯುತ್ತಾಳೆ
ಇಂಥವಳ ಆಯುಷ್ಯ ಬರೆಯಲು ಯಾರಿಗಿದೆ ತಾಕತ್ತು?
ಎಪ್ಪತ್ತು ಬರಿಯ ಕಾಲನ ಕರಾಮತ್ತು
ಉಳಿಸಿಕೊಳ್ಳಲು ತನ್ನ ಕಿಮ್ಮತ್ತು.

– ಬಸವರಾಜ ವಕ್ಕುಂದ

## ‘ಜೀವಧ್ವನಿ’ಯಾದ ಕವಿ

‘ಹೊಂಬಳ’ದ ಊರಾಗ ಮುಂಬೆಳಗ ಆಗ್ಯಾದ
ಇಂಬಾಗಿ ನಾಡ ತುಂಬೆಲ್ಲ। ಧಾರವಾಡ
‘ಚೆಂಬೆಳಕು’ ಚೆಲುವು ಚೆಲ್ಯಾದ ॥೧॥

ಬಣ್ಣ ಬಾಳೆಯ ಹಣ್ಣು, ಕಣ್ಣು ಕವಳೆಯ ಕಾಯಿ
ಸಣ್ಣ ಶ್ಯಾಂವಿಗಿ ಸಕ್ಕರೆಯ। ಸವಿಮಾತು
ಬೆಣ್ಣೆಯಂಥ ಮನಸು ಈ ‘ಕವಿ’ಗೆ ॥೨॥

ನೋವು ನಲಿವನು ಉಂಡು ‘ಭಾವಜೀವಿ’ಯು ಆಗಿ
ಭಾವ ಶುದ್ಧಿಯಾ ಪ್ರೇಮದಲಿ। ‘ನೆಲಮುಗಿಲು’
ಕಾವ್ಯ ಸೇತುವೆಯಾಗಿ ನಿಂತಾನ ॥೩॥

ರವಿಯು ಕಾಣದ್ದನ್ನು ಕವಿಯಾಗಿ ಕಂಡಾನ
ಭವದ ಬಾಳಿನಾ ಸ್ಥಿತಿಗತಿಗೆ।ನಾಡಿನಲಿ
‘ಜೀವಧ್ವನಿ’ಯಾಗಿ ನುಡಿದಾನ ॥೪॥

ನುಡಿಚೆನ್ನ ನಡೆಚೆನ್ನ ಹಿಡಿದ ಹಾದಿಯು ಚೆನ್ನ
ದುಡಿಮೆಯಲಿ ಚೆನ್ನ ಸಾಹಿತ್ಯ।ಸರಸೋತಿ
ಮುಡಿಗೆ ಹೂವನ್ನು ಮುಡಿಸ್ಯಾನ ॥೫॥

ನಾಡ ಜನತೆಯು ಮೆಚ್ಚಿ ಹಾಡೂತ ಮನ ತುಂಬಿ
ಕೂಡಿ ಸನ್ಮಾನ ಮಾಡ್ಯಾರ। ಸಾಹಿತಿಗೆ
ನಾಡ ಹಬ್ಬದಲಿ ನಮ್ಮ ಜನ ॥೬॥

ಸಾದಾ ಸೀದಾ ಜೀವ ಹೋದ ಹೋದಲ್ಲೆಲ್ಲ
ನಾದ ಮಾಧುರ್ಯ ಕಾವ್ಯದ।ಸವಿಜೇನ
ಸ್ವಾದ ಉಣಿಸ್ಯಾನ ಸರುವರಿಗೆ ॥೭॥

– ಈಶ್ವರ ಕಾಪಸೆ
(೯೮೨)



ಮುಗಿಯದ ಹಾಡು

## ಸಮರಸದ ಕವಿ

ಗಗನದಿ ಸಾಗಿವೆ ಚಿರಂತನ ದಾಹದ ಮೋಡಗಳು
ಮೊದಲ, ಮತ್ತೆ ಅಡ್ಡಮಳೆ, ಅಂತೂ ಬಂತು ಕೊನೆಗೆ ಮಳೆ.
ಚಿಗುರಿತು ಹುಲ್ಲು, ಹುಲುಗಲ ಈ ವರ್ಷ ಕಂಡ ಮಳೆಗಾಲ
ಮೋಡ ಉಸುರಿತು ಹಾಡು, ನೆಲದಾಯಿ ಮಕ್ಕಳ ನಲ್ವಾಡು.

ಸ್ವರ್ಣಪಕ್ಷಿ ನೀಲಪಕ್ಷಿ ಹಚ್ಚಿಕೊಂಡು ಹೊಸಪುಕ್ಕ ರೆಕ್ಕೆ
ಕಣಿವೆ ತಟಾಕ ನಿತ್ಯ ದುಡಿಮೆ ಗೂಡು ಗುಡಿಸಲು ಆಯ್ಕೆ
ಒಡಲು ನರಕ ಭಾಂಡ ಗಿರಿಗಿರಿ ಗಿಂಡಿ ಚಕ್ರದಂತೆ
ಸಾವಗೆದ್ದಿಹ ಬದುಕು ಕವಿತೆಗೆ ಮೂಲವಸ್ತು.

ಭಾವಜೀವಿ, ದೀಪಧಾರಿ, ಆಕಾಶಬುಟ್ಟಿ ಹೊರಟಿತು ಮಧುಚಂದ್ರಿಕೆ
ನೆಲಮುಗಿಲು, ಎರಡುಡದಿ ನಡೆಸಿ ಮಣ್ಣಿನ ಮೆರವಣಿಗೆ, ಜೀವಧ್ವನಿ
ಕರೆಗೆ.

ನಗರದ ನೆರಳಿಗೆ ಕಾರ್ತಿಕ ಮೋಡವಾಗಿ ಬಂದ ಸ್ನೇಹಿತ ಶಿಶಿರದಲ್ಲಿ
ಭೂಮಿ-ಆಕಾಶ, ನೆರಳು-ಬೆಳಕು ಸಮಾಹಿತ ಬಿಸಿಲು ಬೆಳದಿಂಗಳಲ್ಲಿ.

ಸುನೀತ ಸಿಂಪಿನೊಳಗಿನ ಮುತ್ತು ಕವಿಯ ವಿನೂತನ ಕೈಫಿಯತ್ತು,
ಕಣವಿ ಕಾವ್ಯದವಲೋಕನ ಬೆಳಪಲದ ಬಾಗಿನ, ಅಶ್ರುತಗಾನ
ಸಮರಸದಿ ವರ್ತಮಾನ-ಶತಮಾನಕ್ಕೆ ಹಿಡಿದ ಕನ್ನಡಿ,
ಸಾವಿರದ ಸತ್ಯ ಮಾತ್ಹೇಳತೀನಿ ಕವಿ ಮನದ ಒಳ್ನುಡಿ.

– ಸಂಗಮೇಶ ಚಿಕ್ಕನರಗುಂದ

೭೧

## ಕವಿ-ದರ್ಶನ

ಮೆಲ್ಲಮೆಲ್ಲನೆ ಹೋಗಿ
ಗೇಟನ್ನು ಕಿರಕ್ ಎನ್ನಿಸದೆ ತೆಗೆದೆ,
ನನಗೆ ಹೂಗಳು
ಹೇಳಿಯೇ ಬಿಟ್ಟವು ಸನ್ನೆಮಾಡಿ
ಒಳಗೆ ಇರುವರೆಂದು,
ಆ ಚೆಂಬೆಳಕಿನ ಮೇಲೆ
ತೀಡುತಿತ್ತು ಸುಗಂಧಗಾಳಿ,
ಸುತ್ತೆಲ್ಲ ಒಳಹೊರಗೆ ಶಬ್ದ ನಿಶ್ಯಬ್ದ.
ಹಗುರಾಗಿ ಸರ್ ಎಂದೆ
ಬಾಗಿಲು ತೆರೆದಲ್ಲಿ
ಕಾವ್ಯ ಕಾಯದ ದರ್ಶನ
ನನ್ನ ಕಣ್ಣು ಪಾವನ,
ಹಾಗೆ ವಿಶ್ವವೂ ತಿಳಿದಿರಬಹುದು ಖಚಿತ.
ಮನಸು
ಇಬ್ಬನಿಯ ಹರಳು.
ನೋಡನೋಡುತ್ತಿದ್ದಂತೆ
ಸುರಿದಿತ್ತು ಕಾವ್ಯದಮಳೆ
ತಣಿದಿತ್ತು ಬಾಳೆ, ಶ್ರಾವಣದ ಕಳೆ
ನೋಡಿದೆ
ಮಣಿದೆ
ತಣಿದೆ.

– ಯಲ್ಲಪ್ಪ ಹಲಕುರ್ಕಿ

# ಕಾವ್ಯದೈವತ್ತು ವಸಂತಗಳ ಮಿತ್ರ

ಸಪೂರ ದೇಹದಲಿ ಸೆಳೆವ ಬೆಳ್ಳಕ್ಕಿ ಬಣ್ಣ
ಹರಿತ ಬುದ್ಧಿಯ ತೀಕ್ಷ್ಣ ನೋಟ,
ಹೊಳೆವ ಕಣ್ಣುಗಳಿಗೆ ಒಪ್ಪುವ
ಕಪ್ಪು ಅಂಚಿನ ಕನ್ನಡಕ,
ಸದಾ ಮುಖದಲಿ ಮುಗುಳ್ನಗೆ
ಅರೆ ಬಿರಿದ ಮೊಗ್ಗಿನಂತೆ
ಕಾವ್ಯ ತಾನಾಗಿ ತಾನೇ ಕಾವ್ಯವಾದ
ಅಮೂರ್ತದಲಿ ಮೂರ್ತಗೊಂಡಂತೆ!

ಎಪ್ಪತ್ತರಲ್ಲಿಯೂ ಇಪ್ಪತ್ತಾರರ ಉತ್ಸಾಹದೀ ಬುಗ್ಗೆ
ಪ್ರಕೃತಿ ಚೆಲುವನೇ ಕಾವ್ಯದೋರಣದಲಿ
ಕಟ್ಟಿಕೊಟ್ಟ ಕಲೆಗಾರ!!

ಕನ್ನಡದ ಹಲವು ವಾರಿಧಿ ಈಜಿದರೂ
ಹಮ್ಮುಬಿಮ್ಮುಗಳಿರದ ಸೌಜನ್ಯದ ಸಾಕಾರಮೂರ್ತಿ,
'ಸುನೀತ'ದಲಿ ಸುಲಭವಾಗಿ ಬಿಡಿಸಿಟ್ಟ
ಕಾವ್ಯ ಕುಸುಮದೆಳೆಗಳನು ಹಲವು ದೃಶ್ಯಾವಳಿಯಂತೆ;
ಸ್ಮಂತಿಕೆಯ ಛಾಪಖಾನೆ ತೆರೆದ;
ಸೆಲೆಯೊಡೆದ ಒರತೆಯಂತೆ!!!

'ಕಾವ್ಯಾಕ್ಷಿ'ಯಲಿ ಅರಳಿದ ಕವಿತೆ
'ಶಿಶಿರದಲಿ ಬಂದ ಸ್ನೇಹಿತನಲ್ಲಿ'ಮಘಮಘಿಸಿ
'ವಿಶ್ವಭಾರತಿಗೆ ಕನ್ನಡದಾರತಿ' ಬೆಳಗಿಹುದು.
ಭಾವಜೀವಿಯಲಿ ಜೀವಧ್ವನಿ ಸೆಲೆಯೊಡೆದು
'ಚೆಂಬೆಳಕಾ'ಗಿ ಹೊಂಬೆಳಗ ತೂರಿದ ಪರಿಯು.

ಹೊಯ್ಸಳ ನಾಡಿನ 'ಕನ್ನಡ ನುಡಿಹಬ್ಬದಲಿ'
ಒಡೆಯನಾಗಿ 'ಹೆಸರಾಯ್ತು ಕರ್ನಾಟಕ ಉಸಿರಾಗಲಿ ಕನ್ನಡ'ವೆಂಬ
ಕಹಳೆ ಮೊಳಗಿಸಿರುವರು.
ಹೊಸಗನ್ನಡದ ಕಾವ್ಯದ ಐವತ್ತು ವಸಂತಗಳ ಮಿತ್ರ,
ಕನ್ನಡಮ್ಮನ ಕಣಜದಲಿ
ಹೊಳೆವ ನಕ್ಷತ್ರ.

– ಗಂಗಾಧರ ಅವಟೇರ.

# ಕಾವ್ಯ ಋಣ

ಹೊಂಬಳದಾ ಅಂಬರದಲಿ
ಅರುಣೋದಯವಾಗಿ,
ಕಾವ್ಯ ಪ್ರಭೆ ಥಳಥಳಿಸಿತು
ಧಾರವಾಡದಿ ಮಾಗಿ.

ಆ ಜೀವವು ವಿಸ್ಮೃತಿಗೆಡೆ
ಗೊಡದಿಹ ಮಿತ್ರತ್ವ,
ಸೌಜನ್ಯದ ಸೌಶೀಲ್ಯದ
ಅನುಪಮ ವ್ಯಕ್ತಿತ್ವ.

ಮೃದು ಹೃದಯದ ಸದುವಿನಯದ
ಸಮಚಿತ್ತದ ಮೂರ್ತಿ,
ಮುದ ನೀಡುವ ಮುಖ ಮುದ್ರೆಯು
ಕರುಣಿಸುತಿದೆ ಸ್ಫೂರ್ತಿ.

ಹೆಸರಾಯಿತು ಕರ್ನಾಟಕ
'ಕನ್ನಡ ಉಸಿರೆಂದು'
ಹೊಸ ಘೋಷಣೆ ಮೊಳಗಿಸಿದಿರಿ
ಯಶ ಸಾಧಿಸಿ ಇಂದು.

ಅನುರಣಿಸಿದೆ ಜನಮನದಲಿ
ಚಿನುಮಯದಾ ಹಾಡು,
ಋಣಿಯಾಗಿದೆ ಅನವರತವು
ಚೆಲುಗನ್ನಡ ನಾಡು.

ನುಡಿದರೆ ರಸ ಮಡುಗೊಳುವುದು
ನಡೆ ಅನುಕರಣೀಯ;
ಸೆಡವಿಲ್ಲದ ಸದ್ವರ್ತನೆ
ಪರಮಾದರಣೀಯ.

ಹೊಳೆಹೊಳೆಯುವ ಕಂಗಳಲಿಹ
ಬೆಳದಿಂಗಳ ಕಾಂತಿ,
ತಳಮಳವನು ಕಳೆದೊಡಲಲಿ
ನೆಲೆಗೊಳುವುದು ಶಾಂತಿ.

'ಕಲ್ಯಾಣ'ದ ನಗರದ ಸಿರಿ
ಸೌಧದ "ಚೆಂಬೆಳಕು"
"ಉಳವೀಶ"ಗೆ ಕಾವ್ಯದ ಸುಧೆ
ಉಣಿಸಿದ 'ಹೊಂಬೆಳಕು'!

– ಉಳವೀಶ ಹುಲೆಪ್ಪನವರಮಠ

## ಕಲ್ಲು ಸಕ್ಕರೆ ಬೆಟ್ಟ

ಎತ್ತ ಕಡಿದರೂನು ಸಿಹಿಯು
ಕಲ್ಲುಸಕ್ಕರೆ ಬೆಟ್ಟವು,
ಬಾಳ ಕುಲುಮೆಯಲ್ಲಿ ತಪ್ತ
ಹೊಳೆವ ಸುವರ್ಣದ ಘಟ್ಟಿಯು.

ಹಸಿರು ತರುಮರ ಕರ್ಕಿ ಕಣಗಿಲ
ಚಲ್ಲುವರಿದಿಹ ಹುಲುಗಲ,
ಬರೆಯಲಾರದ ಕವಿತೆಯಾಗಿವೆ
ಧರತಿಯೆಲ್ಲವು ಮಂಗಲ.

'ಕಣವಿ'ಯೆಂಬುವ ಹೆಸರಿನಲ್ಲಿಯೆ
ಎರಕಹೊಯ್ದಿದೆ ಕವಿತೆಯು
ಶುದ್ಧ ಚರಿತೆಯು ವಿನಯಭಾವವು
ಜೀವದಳೆದಿಹ ಶಕ್ತಿಯು.

ನಮ್ಮ ಅಂಗಳದಲ್ಲಿ ಸುಂದರ
ಕಲ್ಪವೃಕ್ಷವು ಬೆಳೆದಿದೆ,
ನೆಲದ ಪುಣ್ಯದ ಫಲದ ರೂಪದಿ
ಕವಿಯ ಜನನವು ಆಗಿದೆ.

ನಮ್ಮ ಹೃದಯದ ಉದ್ದ ಅಗಲಕು
ತುಂಬಿ ತುಳುಕುವ ಅಮೃತ,
ಭಾವ ಅನುಭವ ಸಾರ ಹನಿಹನಿ
ಲಿಂಗಕೆರೆಯುವ ಮಜ್ಜನ.

ನೂರು ಪರುವತ ದಾಟಿ ನುಗ್ಗಲಿ
ನಮ್ಮ 'ಕಣವಿ'ಯ ದಾರಿಯು,
ಕಾವ್ಯ ದಭೆದಭೆಯಾಗಿ ಸುರಿಯಲಿ
ಚಿಗಿತು ಬಂಜರು ಭೂಮಿಯು!

– ಈಶ್ವರ ಕಮ್ಮಾರ

# ಹಸಿರು ಕಣವಿ

ಬಿರು ಬಿಸಿಲ ಬಯಲಲ್ಲಿ
ಧಗೆ ಧಗಿಸೋ ಹೆಬ್ಬಂಡೆ ಉಗಿ ಉಗಿವ ಮಾತಲ್ಲಿ
ಎಲ್ಲೆಂದರಲ್ಲಿ ಪಿಚಕ್ಕನೆ
ಸಿಡಿವಲ್ಲಿ, ಸುಡುವಲ್ಲಿ
ಎಷ್ಟು ಸೋಜಿಗ ತಂಪು
ನಮ್ಮ ಈ ಧಾರವಾಡದ ಕಣವಿ!

ಮೆದು ಮಾತ ನಿತ್ಯ ಹರಿದ್ವರ್ಣದ ಕಾನು,
'ನಾ' ಕರಗಿ ನೀರಾಗಿ ಗುಪ್ತಗಾಮಿನಿಯಾಗಿ
ಅಂಗುಲಂಗುಲ ಉಸಿರು ಹಸಿರು ಕಚ್ಚಿದೆಯೇನು?
ಅದಕ್ಕೆ ಸಾದಾ ಮಾತಿಗೂ ಇಷ್ಟು ಸ್ವಾದ ಚಿಮ್ಮಿದೆಯೇನು?

ಕಣವಿ ತುಂಬಿದೆ ಧೂಪ, ಗಂಧ, ಚಂದನ ವೃಕ್ಷ
ಮಾವು, ಹಲಸು, ಬಾಳೆ ಸಮೃದ್ಧ ಕಲ್ಪವೃಕ್ಷ
ಹೆಸರಿರದ ಗಿಡ ಬಳ್ಳಿ ಹುಲ್ಲು ಮರ ಲಕ್ಷ
ಮಂದಗಾಳಿಗೆ ಪುಳಕ ಥಕಥೈ ಕುಣಿವ ಪುಷ್ಪ ಲಕ್ಷೋಪಲಕ್ಷ.
ಕ್ಷಣಕಾಲ ನಿಂತಂಥ ನದಿ ಸರಸಿ ಕಣ್ಣು
ಹಿಡಿದಿಟ್ಟ ಲೋಕ ಅನ್ಯಾದೃಶ್ಯ.

ಸೊಕ್ಕಿ ಧುಮುಕುವ ಆ ಶಕ್ತಿ ಜಟೆಯಲಿ ಧರಿಸಿ
ಜೀವನದಿ ಗಾನ ಗಂಗೆ ಹರಿಸಿದವರಾರು?
ನೆಲಮುಗಿಲ ಸಂಬಂಧ ಜಟಿಲತೆಗಳ ರಸಗಂಧ
ಗಂಧರ್ವ ಕೊರಳಲ್ಲಿ ಹೊಮ್ಮಿಸಿದವರಾರು?
ಎರಡು ದಡಗಳ ಮಧ್ಯೆ ದೋಣಿ ನಡೆಸುತ ನಿತ್ಯಾ-
ನಿತ್ಯ ರಹಸ್ಯಗಳ ಭಾಷ್ಯ ಬರೆದವರಾರು?
ಈ ಹೊತ್ತು ಹೊತ್ತಿಗೆ ಭಾಷ್ಯ ಶತಮಾನಕ್ಕೆ ಜಿಗಿಯಲಿ
ಮಾಲಿನ್ಯ ಬಯಲಲ್ಲಿ ಹಸಿರು ಕಣವಿ ಧ್ವನಿ ಬೆಳಗಲಿ!

– ಟಿ. ಜಿ. ಭಟ್ಟ, ಹಾಸಣಗಿ

## ಕಂಡೀರಾ ಕವಿಯ?

ಕಂಡೀರಾ ಕವಿಯ ಕಂಡೀರಾ
ಕನ್ನಡದ ರಷಋಷಿಯ ಕಂಡೀರಾ॥

ಏರಿಯ ಮೇಲೇರಿ ತೂರಿ ಹೊಂಬಣ್ಣದಲಿ
ಮುಗಿಲ ಬಿತ್ತರದಲ್ಲಿ ನುಡಿಮಾಲೆ ಕಟ್ಟಿ
ಬಯಲೀನ ಗಾಳ್ಯಾಗ ಸೊಬಗೀನ ಮಲೆಯಾಗ
ಕಾಡು ನಾಡನು ಮಾಡಿ ನುಡಿತೇರು ಎಳೆದವನ ॥ ಕವಿಯ ಕಂಡೀರಾ ॥

ಕಾವ್ಯಾಕ್ಷಿಯಿಂದಲೇ ನುಡಿಬಾಣ ಬಿಟ್ಟವರು
ಮೇಘೋಪಾಸನೆಯಲ್ಲಿ ಓ ಭಾವಜೀವಿ
ಆಕಾಶಬುಟ್ಟಿ ಹೊಗೆತುಂಬಿ ತೂರುತ್ತ
ಗಾಳೀಯ ಜತೆಯಲ್ಲಿ ಮೈಮರೆತು ಹಾಡಿರುವ ॥ ಕವಿಯ ಕಂಡೀರಾ ॥

ವಿಶ್ವಕವಿಯ ದೃಶ್ಯಕಾವ್ಯ ಛತ್ರದಲ್ಲಿ
ಸೃಷ್ಟಿನೋಂತು ನಿಂತಿರುವ ಚಿತ್ರಬರೆದು
ಮುಟ್ಟಿದರೆ ಮಾಸುತಿಹ ಮಕಮಲ್ಲ ಮಾತಿನಲಿ
ತಿಳಿನಗೆಯ ಅರಳಿಸುತ ಮಲ್ಲಿಗೆಯ ಸುರಿಸುವ ॥ ಕವಿಯ ಕಂಡೀರಾ ॥

ಹೇಮಂತಗಾನದಲ್ಲಿ ನಾದಲಹರಿಯ ಚಿಮ್ಮಿ
ಧೀಮಂತ ಕವಿಯಾಗಿ ಬಂದಿಹುದು ತೇಜ
ಜೇನಿನಾ ಹನಿಯಂತೆ ಮಾತು ಮಧುರತಮ
ತೀರಲಾರದ ಸ್ನೇಹ, ಹದುಳ ಬಯಸುವ ನಮ್ಮ ॥ ಕವಿಯ ಕಂಡೀರಾ॥

ಕಿವಿಗಿಂಪು ಬಲುಸೊಂಪು ಮಧುರ ಹಾಡಿನ ಪೆಂಪು
ಬೆಳವಲದ ಬಾಗಿನದಿ ಕರುನಾಡ ತಣ್ಪು
ಜೀವಜೀವದ ತುಂಬ ಧ್ವನಿ ಸುನೀತದ ಬಿಣ್ಪು
ಉಕ್ಕಿ ಹರಿದಿದೆ ಹಾಡು ಕೇಳಿದಿರಾ ಕಿವಿದೆರೆದು ॥ ಕವಿಯ ಕಂಡೀರಾ ॥

– ವಿರೂಪಾಕ್ಷ ಬಡಿಗೇರ
(೧೯೮೭)

## ಮೌನಕಣಿವೆಯ ಒಡಲು

ಗಿಳಿ ಗುಬ್ಬಿ, ಗೊರವಂಕ ಮಡಿವಾಳ
ಮಿಂಚುಳ್ಳಿ ಒಂದಾಗಿ
ಚಿಲಿಪಿಲಿಗುಟ್ಟುತಿವೆಯಿಲ್ಲಿ,
ಕೋಗಿಲೆಯ ಸಂಗೀತ ಕಛೇರಿಯಲ್ಲಿ.

ಹೂ ಹಣ್ಣು ಬಣ್ಣಬಣ್ಣದ
ಚಿತ್ತಾರ ನೀಲಿಯಾಗಸದ ಬಿತ್ತರ,
ಈ ಮೌನ ಕಣಿವೆಯೊಡಲಲ್ಲಿ ಕಾವ್ಯ ಅರಳಿ
ಮಧು-ಮಧುರ ಗೀತ ಸುನೀತ
ಆಳದಲಿ ಹರಿವ ನದಿಗಿಲ್ಲ ಅಬ್ಬರ.
ಚೆಂಬೆಳಕಿನಲಿ ಹರಿವ ಹೊಳೆ
ಶಾಲ್ಮಲೆ ಗುಪ್ತಗಾಮಿನಿ
ಎರಡು ದಡದಲ್ಲೂ ಸಮನ್ವಯ;
ಪ್ರೀತಿಗೆ ನೀತಿಗೆ ಕರಗುವ
ಕಮನೀಯತೆ ಆಪ್ತವಾಗುವ ಆಕೃತಿ
ಆಕಾಶ ಬುಟ್ಟಿಯಲ್ಲಿ ಕಾವ್ಯಾಕ್ಷಿ,
ನಗರದಲಿ ಕವಿದ ನೆರಳಿಗೆ
ದೀಪಧಾರಿಯ ಹೊಂಬೆಳಕು,
'ಮುಟ್ಟಿದರೆ ಮಾಸುತಿಹ ಮಂಜು ಹನಿ ಮುತ್ತು'
ರಂಜನೆಗಾಡಿದ ಮಾತಿನಲಿ ನಂಜಿಲ್ಲ
ನಂಬು ನಿರಂಜನ ಸಿದ್ಧನೆ ಸಾಕ್ಷಿ.

– ಶ್ರೀಪಾದ ಶೆಟ್ಟಿ

## ಬತ್ತದ ತೆನೆ

ತಣ್ಣಗೆ ಸುಳಿವ ಎಳೆಗಾಳಿ ಹಸಿರು ತೀರ
ನ್ನೇರಿ ಸೂರ್ಯಸವಾರಿ; ಹೆಜ್ಜೆಹೆಜ್ಜೆಗು
ಝುಣ ಝುಣರು ದನಿ ಕುಣಿವ ಜೀವ
ದ ಗೆಜ್ಜೆ ಧ್ಯಾವಾ ಪೃಥ್ವಿಯ ತುಂಬ

ಚೈತನ್ಯದ ಪೂಜೆ, ಲಕ್ಷ ನಕ್ಷತ್ರಗಳ
ಅಕ್ಷಯ ಪಾತ್ರೆಯಲಕ್ಷರದ ದಾಸೋಹ
ಸೋಹಂ ಸೋಹಂ ಮಂತ್ರರ ಸಮನ್ವಯ
ದಿವ್ಯ ಧ್ಯಾನಾಸಕ್ತ ಜನರ್ಷಿ; ಔದುಂಬರ ವೃಕ್ಷ

ಕಣ ಕಣದ ಮೌನವನೊಡೆದು ತುಷಾರ
ಧಾರೆ ಧಾರೆ ತಿಂಗಳ ತುಂಬಿ ನಡೆವ ಶಾಲ್ಮಲೆ
ಗಮನವೆಲ್ಲವು ಗಹನ; ಗಿರಿಕಾನನ ಕಾವ್ಯ
ಕಣಿವೆ ಕಣಿವೆಯೊಳೆಲ್ಲ ಗಂಧರ್ವಗಾನ

ನೆಲನೆಲದ ನೋವಿಗೂ ನೂರು ತೆನೆ, ಹೊಂಬಾಳೆ
ಹರಿವಾಣ ಹೂ ಹಣ್ಣ ಕಣಜ; ಬತ್ತದ ಕಾಳು
ಗುಬ್ಬಿ ಗಿಳಿ ಬಾಯ್ತುಂಬ ಚೆಂಬೆಳಕ ಪಲಕು
ಆಯ್ದು ಆಡಿಸುವ, ಮೆಲ್ಲ ಮೆಲಕಾಡಿಸುವ ಪುಳಕ.

– ಜಿ.ಎಸ್. ಅವಧಾನಿ

## SLIDING INTO THE SEVENTIES

(for friend Chennaveera Kanavi as he slides into the seventies without fuss or flourish)

This placid native stream,
born in remote ancient rocks
that secrete the secrets of time,
has been flowing in and around the seven hills
of this dream-drenched village of a town
for seventy monsoons,
rivalling the local river, Shalmala,
driving her into a subterraneous life!
The Crystal-clear waters of this stream,
their skin skillfully woven of soft-spoken words,
mirrors the world as a slow-motion picture-
reducing the precipices of passion
into gentle, emerald green slopes,
whittling all violence down
to the graceful gestures of a Manipuri dance,
silencing all agonised screams
into poems that freeze life's fury and frenzy,
hammering all evil into sculptures bronze
ready to fill the sacred space of a Chalukyan temple.
Well, so we think,
and so he wants us to think,
but the truth behind the truth,
to tell nothing but the truth, is-
he had swallowed all passions, all violence,
all screams and all evil,
indeed all history,
hiding them in his belching belly,
pouring them out as protective lyrics
that lull the space of our birth and death.

– K. Raghavendra Rao

# ಅಭೀಷ್ಟ ಚಿಂತನಮ್

ಕವಿರ್ಮನೀಷೀ ಮೃದು ಸುಭಾಷೀ।
ಧನ್ಯೋ ರಸರ್ಷಿರ್ಜನತಾ ಹಿತೈಷೀ॥
'ಧಾರಾನಗರ್ಯಾಂ' ನವಕಾಲಿದಾಸಃ।
ಸ್ನಿಗ್ಧೋಽಥ ಮುಗ್ಧೋಽಶ್ಚ ಸುಧೀರ್ವಿದಗ್ಧಃ॥

ಶ್ರೀ ಕನ್ನಡಾಂಬಾ ಹೃದಿ ಕೌಸ್ತುಭೋಽಯಮ್।
ವಾಗ್ಗೇಯಕಾರೇಷು ಪರಂ ವರೇಣ್ಯಃ॥
ಸೌಮ್ಯಾ ಸ್ವಭಾವೋಕ್ತಿರ್ನಿಸರ್ಗರಮ್ಯಾ।
ಯಸ್ಯೈಕ ಶಕ್ತಿಃ ಹೃದಯಾಭಿರಾಮಾ॥

'ಶ್ರೀ ಚೆನ್ನವೀರೇ'ತಿ ಯಥಾರ್ಥನಾಮಾ।
'ಚೆಂಬೆಳಕು' ಸದ್ಮೇತಿ ಕೃತಾರ್ಥಧಾಮಾ॥
ಕರ್ನಾಟಕೈರ್ಯಃ ಶ್ರುತಗೀತಕೀರ್ತಿಃ।
ಚಾರಿತ್ರ್ಯ ಚಾತುರ್ಯ ಗುಣಾಢ್ಯ ಮೂರ್ತಿಃ॥

ಕಾಂತಾಶ್ಚಶಾಂತಾ ಸಹಧರ್ಮಿಣೀ ಸಾ।
ಕಥಾಕಲಾಕೃಷ್ಟ ವಿಮರ್ಶಕಾ ಯಾ॥
ಸಾಹಿತ್ಯ ಸಂಗೀತ ಕಲಾವಿನೋದೈಃ।
ಸಂತೃಪ್ತ-ದಾಂಪತ್ಯ-ನಿದರ್ಶನಂ ಯಾ॥

ವಾಗರ್ಥ ಸಂಪರ್ಕ ಯಶೋವಿಲಾಸೇ।
ಔಚಿತ್ಯಮೌತ್ಸುಕ್ಯಮವಾಪ್ಯ 'ದೇಶೀ'॥
ಯಸ್ಯಾರ್ತ 'ಜೀವಧ್ವನಿ'ರೇವ ಭಾತಿ।
ಸತ್ಕಾವ್ಯ ರೂಪೇಣ ಸದಾಽನವದ್ಯಮ್॥

ಯಃ ಕಾವ್ಯಧರ್ಮಾಹ್ಯಕಲಂಕ ಕರ್ಮಾ।
ವಚೋಮೃತಾ ಪಾನಮದೋಽಪ್ಯ ಮತ್ತಃ॥
ಕಾವ್ಯಾನುಸಂಧಾನ ಪರಾಯಣಶ್ಚ।
ಏಷಃ ಶುಭಃ ಸಪ್ತತಿ ವತ್ಸರೋಽಪಿ॥

ಸೌಂದರ್ಯ ಮಾಧುರ್ಯ ಗಭೀರಿಮಾಢ್ಯಃ।
ಮುಕ್ತಾಸುಹಾರೇವ ರಚನಾ ಕಲಾವಾನ್॥
ಶಬ್ದೋಹಿ ರಮ್ಯಃ ಖಲು ಯಸ್ಯ ಕಾವ್ಯೇ।
ಸ ತ್ವಂ ಕವಿಶ್ರೇಷ್ಠಃ! ನಮೋ ನಮಸ್ತೇ॥

ಜೀಯಾತ್‌ಚಿರಂ ಶ್ರೀಯುತ ಭಾಗ್ಯವೃದ್ಧಮ್।
'ಕಣವೀ' ಕುಟುಂಬಂ ಕುಶಲಂ ಸಮೃದ್ಧಮ್॥
ಭೂಯಾಚ್ಚಿರಂ ಜೀವಿತಾಯುಕ್ತ ಏಷಃ।
ನವೋ ನವೋನ್ಮೇಷ ವಿಶೇಷ ಶೋಭಃ॥

ಮೇ ಶಂಸನಂ ಸ್ವೀಕುರು ಭೋಃ ಕವೀಂದ್ರ।
ಪ್ರೀತ್ಯಾದರೇಣೈವ ಸಮರ್ಪಿತಂ ತತ್॥
ಮನ್ಯೇ ಸುಧನ್ಯೋಽಸ್ಮಿ ತವ ಪ್ರಸಾದಾತ್।
ನಕಿಂಚಿದಿಚ್ಛಾಮ್ಯಧಿಕಂ ಹೃತೋಽಪಿ॥

– ಗೌರೀಶ ಕಾಯ್ಕಿಣಿ

# ಸಂಕಲನದ ಕವಿಗಳು

೧. ಡಾ|| ಜಿ. ಎಸ್. ಶಿವರುದ್ರಪ್ಪ
೮೬೭, ಚೈತ್ರ, ೧೮ನೇ ಮೇನ್
ಬನಶಂಕರಿ II ಹಂತ
ಬೆಂಗಳೂರು-೫೬೦೦೭೦

೨. ಪ್ರೊ. ಕ. ವೆಂ. ರಾಜಗೋಪಾಲ
ಎಂಐಜಿ, ೪೧, ೮೦ ಅಡ್ಡರಸ್ತೆ
II ಹಂತ ಕೆಂಗೇರಿ
ಬೆಂಗಳೂರು-೫೬೦೦೬೦

೩. ಶ್ರೀ ಬಿ. ಎ. ಸನದಿ
A, 14, Anuj co-op Society
Parvat Nagar, Dahisar(E)
Mumbai-400068

೪. ಡಾ||ಸಿ. ಪಿ. ಕೃಷ್ಣಕುಮಾರ
೨೯೫/೧೯ ಭಾರತಿ ೬ನೇ ಕ್ರಾಸ್
೨ನೇ ಮೇನ್, ವಿನಾಯಕನಗರ
ಮೈಸೂರು-೫೭೦೦೧೨

೫. ಡಾ||ಎಚ್. ಎಸ್. ವೆಂಕಟೇಶಮೂರ್ತಿ
೩೦ ಸಂಕಲ್ಪ, ಪುಷ್ಪಗಿರಿನಗರ
ಬನಶಂಕರಿ ೩ನೇ ಘಟ್ಟ
ಬೆಂಗಳೂರು-೫೬೦೦೮೫

೬. ಶ್ರೀ ಜಯಂತ ಕಾಯ್ಕಿಣಿ
2-D-57 Vaishali Nagar
Mulund(w)
Mumbai-400080

೭ ಶ್ರೀನಿವಾಸ ತೋಫಖಾನೆ
ರಮಾಪ್ರಸಾದ,
ಶಾಂತಿ-ಕಾಲನಿ(ಉತ್ತರ)
ಹುಬ್ಬಳ್ಳಿ-೫೮೦೦೩೨

೮. ಶ್ರೀ ಶಂ. ಗು. ಬಿರಾದಾರ
ಕಮಲಕುಂಜ, ಶಾಸ್ತ್ರಿನಗರ
ತೊರವಿ ರಸ್ತೆ,
ಬಿಜಾಪುರ-೫೮೬೧೦೧

೯. ವಿಷ್ಣು ನಾಯ್ಕ
ಶ್ರೀ ರಾಘವೇಂದ್ರ ಪ್ರಕಾಶನ
ಅಂಬಾರಕೊಡ್ಲ
ಅಂಕೋಲಾ-೫೮೧೩೧೪

೧೦. ಡಾ|| ದೇವೇಂದ್ರಕುಮಾರ ಹಕಾರಿ
ಕರುಣಾಂಜಲಿ, ಶ್ರೀನಗರ
ಧಾರವಾಡ-೫೮೦೦೦೩

೧೧. ಡಾ|| ಚೆನ್ನಣ್ಣ ವಾಲೀಕಾರ
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ-೫೮೫೧೦೬

೧೨. ಪ್ರೊ. ಮಾಲತಿ ಪಟ್ಟಣಶೆಟ್ಟಿ
ಶ್ರೀ ಗಣೇಶ ಅಪಾರ್ಟಮೆಂಟ,
ರಜತಗಿರಿ
ಧಾರವಾಡ-೫೮೦೦೦೪

೧೩. ಡಾ|| ಎಸ್. ಪಿ. ಪದ್ಮಪ್ರಸಾದ
ಶಿಕ್ಷಣ ಮಹಾವಿದ್ಯಾಲಯ
ಮಧುಗಿರಿ

೧೪. ಶ್ರೀ ಆನಂದ ಝುಂಜರವಾಡ
ಸ್ನೇಹದೀಪ, ಆನಂದನಗರ
ಮುಧೋಳ-೫೮೭೩೧೩
ಜಿ:ಬಾಗಲಕೋಟ

೧೫. ಡಾ|| ಮಲ್ಲಿಕಾ ಘಂಟಿ
ಸ್ನಾತಕೋತ್ತರ ಕೇಂದ್ರ
ನಂದಿಹಳ್ಳಿ, ಜಿ: ಬಳ್ಳಾರಿ - ೫೮೩೧೧೯

೧೬. ಡಾ|| ಬಸವರಾಜ ಸಬರದ
ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ-೫೮೫೧೦೬

೧೭. ಶ್ರೀ ಸಿದ್ಧರಾಜ ಪೂಜಾರಿ
ಕವಿಬನ, ಲಕ್ಷ್ಮೀನಗರ
ಬನಹಟ್ಟಿ-೫೮೭೩೧೧
ಜಿ:ಬಾಗಲಕೋಟ

೧೮. ಶ್ರೀ ಶಂಕರ ಪಾಟೀಲ
ಕಲಾಭವನ, ವಿದ್ಯಾನಗರ
ದಾವಣಗೆರೆ-೫೭೭೧೦೫

೧೯. ಶ್ರೀ ದೇಶಪಾಂಡೆ ಸುಬ್ಬರಾಯ
'ನೆಲೆ' ಕುಸುಮನಗರ
ಧಾರವಾಡ-೫೮೦೦೦೮

೨೦. ಡಾ|| ಕಮಲಾ ಹೆಮ್ಮಿಗೆ
೫೦, ಆಶೀರ್ವಾದ
ಶಿವಗಿರಿ
ಧಾರವಾಡ-೫೮೦೦೦೭

೨೧. ಪ್ರೊ. ಸುನೀತಾ ಶೆಟ್ಟಿ
B.28, Shiva Sruti
Sarvodaya Society
Kurla, Mumbai-400024

೨೨. ಡಾ|| ಶ್ರೀರಾಮ ಇಟ್ಟಣ್ಣವರ
ಪದವಿಪೂರ್ವ ಕಾಲೇಜು
ಬೀಳಗಿ-೫೮೭೧೧೬ ಜಿ:ಬಾಗಲಕೋಟ

೨೩. ಶ್ರೀ ಜಗದೀಶ ಮಂಗಳೂರಮಠ
ಎಲ್‌ಐಜಿ-೩೮, ಗಾಂಧಿನಗರ
ಗೋಕುಲರಸ್ತೆ, ಹುಬ್ಬಳ್ಳಿ-೫೮೦೦೩೦

೨೪. ಶ್ರೀ ಜಂಬಣ್ಣ ಅಮರಚಿಂತ
೧೦-೫-೬೭,
ಮಕ್ತಲಪೇಟ
ರಾಯಚೂರ-೫೮೪೧೦೧

೨೫. ಶ್ರೀ ಅಶೋಕ ಚೊಳಚಗುಡ್ಡ
ಪ್ರಸಾರಾಂಗ,
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-೫೮೦೦೦೩

೨೬. ಶ್ರೀಮತಿ ಸುಮಿತ್ರಾ ಹಲವಾಯಿ
'ವಿಶಾಲ' ಶಕ್ತಿನಗರ
ಧಾರವಾಡ-೫೮೦೦೦೪

೨೭. ಶ್ರೀ ನಿಂಗಣ್ಣ ಕುಂಟಿ
ನಂ. ೧೪ ಬಿ. ಗೃಹಮಂಡಳಿಮನೆ
ಧಾರವಾಡ-೫೮೦೦೦೮

೨೮. ಡಾ|| ವಾಮನ ಬೇಂದ್ರೆ
'ಶ್ರೀಮಾತಾ'
ಸಾಧನಕೇರಿ
ಧಾರವಾಡ-೫೮೦೦೦೮

೨೯. ಪ್ರೊ. ಸಿ. ಪಿ. ಹೇಮಗಿರಿಮಠ
ಹೇಮ, ೭೯ ಜ್ಯೋತಿಕಾಲನಿ
ಸಾಯಿನಗರ
ಹುಬ್ಬಳ್ಳಿ-೫೮೦೦೦೩

೩೦. ಶ್ರೀ ಎಂ. ಡಿ. ಗೋಗೇರಿ
ನವಅಯೋಧ್ಯಾನಗರ
ಹುಬ್ಬಳ್ಳಿ-೫೮೦೦೨೪

೩೧. ಡಾ॥ಬಸವರಾಜ ಸಾದರ
ಆಕಾಶವಾಣಿ ನಿಲಯ
ಧಾರವಾಡ-೫೮೦೦೦೮

೩೨. ಡಾ॥ಶೈಲಜಾ ಉಡಚಣ
೧೪೯೧/೪, ಜೇವರಗಿ ಕಾಲನಿ
ಗುಲಬರ್ಗಾ-೫೮೫೧೦೨

೩೩. ಶ್ರೀ ಮೂಡ್ನಾಕೂಡು ಚಿನ್ನಸ್ವಾಮಿ
ವಿಭಾಗೀಯ ನಿಯಂತ್ರಣಾಧಿಕಾರಿಗಳು
ಕ.ರಾ.ರ.ಸಾ. ಸಂಸ್ಥೆ, ಗದಗ

೩೪. ಶ್ರೀ ನರಸಿಂಹ ಪರಾಂಜಪೆ
ಚೈತ್ರ, ಪ್ರಶಾಂತನಗರ, ೪ನೇ ಕ್ರಾಸ್
ಸಾಧನಕೇರಿ
ಧಾರವಾಡ-೫೮೦೦೦೮

೩೫. ಶ್ರೀ ಸತ್ಯಾನಂದ ಪಾತ್ರೋಟ
ಅಧ್ಯಾಪಕರು
ಶ್ರೀ ಕಾಳಿದಾಸ ಮಾಧ್ಯಮಿಕ ಶಾಲೆ
ಬಾಗಲಕೋಟ-೫೮೭೧೦೧

೩೬. ಶ್ರೀ ಸತೀಶ ಕುಲಕರ್ಣಿ
ಬಸವೇಶ್ವರ ನಗರ
ಹಾವೇರಿ-೫೮೧೧೧೦

೩೭. ಶ್ರೀ ರವಿ ಉಪಾಧ್ಯ
೫೬೧/೧ ಮಠಗಲ್ಲಿ
ಬೆಳಗಾವಿ-೫೯೦೦೦೧

೩೮. ಡಾ॥ ಅಶೋಕ ನರೋಡೆ
ಕಲಾ ಮತ್ತು ವಾಣಿಜ್ಯ ಕಾಲೇಜ
ಮಹಾಲಿಂಗಪುರ
ಜಿ: ಬಾಗಲಕೋಟ - ೫೮೭೩೧೨

೩೯. ಶ್ರೀ ಬಾಳೇಶ ಲಕ್ಷೆಟ್ಟಿ
ಗಂಗಾನಿಲಯ
ಗೋಕಾಕ, ಜಿ:ಬೆಳಗಾವಿ - ೫೯೧೩೦೭

೪೦. ಶ್ರೀ ಡಿ. ಬಿ. ಥಂಗ
ಶಾನಭಾಗ ಕಂಪೌಂಡ,
ಸಪ್ತಾಪುರ ೩ನೇ ಕ್ರಾಸ್
ಧಾರವಾಡ-೫೮೦೦೦೧

೪೧. ಶ್ರೀ ಗವಿಸಿದ್ಧ ಬಳ್ಳಾರಿ
ಜವಾಹರ ರಸ್ತೆ
ಕೊಪ್ಪಳ-೫೮೩೨೩೧

೪೨. ಶ್ರೀ ಬಸವರಾಜ ವಕ್ಕುಂದ
ಕ್ರೈಸ್ತ ಕಾಲೇಜು,
ಹೊಸೂರ ರಸ್ತೆ
ಬೆಂಗಳೂರು-೫೬೦೦೨೯

೪೩. ಶ್ರೀ ಈಶ್ವರ ಕಾಪಸೆ
ನಾಲಬಂದಗಲ್ಲಿ
ಅಥಣಿ-೫೯೧೩೦೪
ಜಿ:ಬೆಳಗಾವಿ

೪೪. ಶ್ರೀ ಸಂಗಮೇಶ ಚಿಕ್ಕನರಗುಂದ
ಪೆಂಡಾರ ಓಣಿ ೩ನೇ ಅಡ್ಡರಸ್ತೆ,
ಕಾಮನಕಟ್ಟಿ, ಧಾರವಾಡ-೫೮೦೦೦೧

೪೫. ಶ್ರೀ ಯಲ್ಲಪ್ಪ ಹಲಕುರ್ಕಿ
ಯಾವಗಲ್ಲ-೫೮೨೨೦೬
ಜಿ:ಗದಗ

೪೬. ಶ್ರೀ ಗಂಗಾಧರ ಅವಟೇರ
ಪತ್ರಿಕಾ ವರದಿಗಾರರು
ಮಹಾಲಿಂಗಪುರ-೫೮೭೩೧೨
ಜಿ:ಬಾಗಲಕೋಟ

೪೭. ಶ್ರೀ ಉಳವೀಶ ಹುಲೆಪ್ಪನವರಮಠ
'ಗುರುಪ್ರಸಾದ'
ಶ್ರೀರಾಮನಗರ
ಧಾರವಾಡ-೫೮೦೦೦೭

೪೮. ಶ್ರೀ ಈಶ್ವರ ಕಮ್ಮಾರ
'ಕಾಮಾಕ್ಷಿಸದನ'
ಮಲ್ಲಸರ್ಜ ವ್ಯಾಯಾಮ ಶಾಲೆಯ ಹಿಂದೆ
ಧಾರವಾಡ-೫೮೦೦೦೮

೪೯. ಶ್ರೀ ಟಿ. ಜಿ. ಭಟ್ಟ, ಹಾಸಣಗಿ
ಎ. ಬಿ. ಬಾಳಿಗಾ ಆರ್ಟ್ಸ್, ಸೈನ್ಸ ಕಾಲೇಜ
ಕುಮಟಾ, ಜಿ: ಉತ್ತರಕನ್ನಡ

೫೦. ಶ್ರೀ ವಿರೂಪಾಕ್ಷ ಬಡಿಗೇರ
ಆಕಾಶವಾಣಿ ನಿಲಯ
ಧಾರವಾಡ-೫೮೦೦೦೮

೫೧. ಡಾ. ಶ್ರೀಪಾದ ಶೆಟ್ಟಿ
ಜಿ. ಸಿ. ಕಾಲೇಜು
ಅಂಕೋಲಾ-೫೮೧೩೧೪
ಜಿ: ಉತ್ತರಕನ್ನಡ

೫೨. ಪ್ರೊ. ಜಿ.ಎಸ್. ಅವಧಾನಿ
ಎಸ್.ಡಿ.ಎಂ. ಮಹಾವಿದ್ಯಾಲಯ
ಹೊನ್ನಾವರ - ೫೮೧ ೩೩೪
ಜಿ: ಉತ್ತರಕನ್ನಡ

೫೩. ಡಾ|| ಕೆ. ರಾಘವೇಂದ್ರರಾವ್
ಕಲ್ಯಾಣನಗರ,
ಧಾರವಾಡ-೫೮೦೦೦೭

೫೪. ಡಾ. ಗೌರೀಶ ಕಾಯ್ಕಿಣಿ
ಗೋಕರ್ಣ-೫೮೧೩೨೬
ಜಿ:ಉತ್ತರ ಕನ್ನಡ



ಅರ್ಧಶತಮಾನದಷ್ಟು ಕಾಲ ಕನ್ನಡ ಕಾವ್ಯಕ್ಷೇತ್ರದಲ್ಲಿ ನಿರಂತರವಾಗಿ ಸಾಧನೆಗೈದು ತಮ್ಮದೇ ಆದ ಕೊಡುಗೆಯನ್ನು ನೀಡಿ, ಕನ್ನಡ ಜನತೆಯ ಪ್ರೀತಿ, ಗೌರವ, ಅಭಿಮಾನಗಳಿಗೆ ಪಾತ್ರರಾದವರು ಕವಿ ಶ್ರೀ ಚೆನ್ನವೀರ ಕಣವಿಯವರು.

ಇಪ್ಪತ್ತು ವರ್ಷಗಳ ಹಿಂದೆ ಅವರಿಗೆ ಐವತ್ತು ತುಂಬಿದಾಗ 'ಚೆಂಬೆಳಕು' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಲಾಗಿತ್ತು. ಅಲ್ಲಿಂದ ಈಚೆಗಿನ ಎರಡು ದಶಕಗಳಲ್ಲಿ ಅವರ ಮಾಗಿದ ಮನಸ್ಸು ಬದುಕಿನ ವಿವಿಧ ಸ್ತರಗಳಿಗೆ ಗಾಢವವಾಗಿ ಸ್ಪಂದಿಸುತ್ತ ಮತ್ತೆ ಹಲವು ಮಹತ್ವದ ಕವಿತೆಗಳನ್ನು ಕನ್ನಡಕ್ಕೆ ನೀಡಿದೆ. ಅಲ್ಲದೆ, ತಮ್ಮ ಎಂದಿನ ಸ್ನೇಹಪರ ನಡೆ-ನುಡಿಗಳಿಂದ ನಮ್ಮ ಸಾಂಸ್ಕೃತಿಕ ಲೋಕದ ಮಾಧುರ್ಯವನ್ನು ಹೆಚ್ಚಿಸಿದ ಶ್ರೇಯಸ್ಸು ಅವರದಾಗಿದೆ.

ಶ್ರೀ ಕಣವಿಯವರಿಗೆ ಎಪ್ಪತ್ತು ತುಂಬುತ್ತಿರರುವ ಈ ಶುಭಸಂದರ್ಭದಲ್ಲಿ ಅವರ ಗೌರವಾರ್ಥ 'ಸೃಜನ-ಚಿಂತನ ಬಳಗ'ವು ಕನ್ನಡ ಕವಿಗಳ ಕವನ ಕಾಣಿಕೆಯನ್ನು ಅರ್ಪಿಸಲು ಯೋಜಿಸಿದ್ದರ ಫಲ ಈ 'ಮುಗಿಯದ ಹಾಡು' - ಕೃತಿ. ಕಣವಿಯವರ ವ್ಯಕ್ತಿತ್ವ ಮತ್ತು ಕವಿತ್ವಗಳೆರಡನ್ನೂ ನಮ್ಮ ಕವಿಮಿತ್ರರು ಆತ್ಮೀಯವಾಗಿ ಗುರುತಿಸಿದುದನ್ನು ಈ ಸಂಕಲನದಲ್ಲಿ ಕಾಣಬಹುದು.

